# ಶ್ರೀ ರಾಮಚಂದ್ರ

ಜಿ. ಪಿ. ರಾಜರತ್ನಂ

ಸತ್ಯಶೋಧನ ಪ್ರಕಟನ ಮಂದಿರ
ಬೆಂಗಳೂರು ನಗರ

ಎಂಟು ಆಣೆ

೧೯೪೫

# ವಿವರ

# ಪ್ರವೇಶ

ಬಹು ಕಾಲದ ಹಿಂದೆ ದೃಢಕಾಯನಾದ ಯುವಕನೊಬ್ಬನು ತನ್ನ ತಂದೆತಾಯಿಗಳನ್ನು ಪೋಷಿಸಲು ಬೇರೆ ದಾರಿ ಕಾಣದೆ ದಾರಿ ಕಾಯಲು ಮೊದಲುಮಾಡಿದನು. ದರೋಡೆ ಮಾಡಿ ಸಂಪಾದಿಸಿದ ಹಣದಿಂದ ಸಂಸಾರ ವನ್ನು ಸಾಕುತ್ತಿದ್ದನು. ಒಂದು ದಿನ ಅವನು ಎಂದಿನಂತೆ ಹೊಂಚು ಹಾಕು ತ್ತಿರುವಾಗ ಮಾರ್ಗದಲ್ಲಿ ನಾರದ ಮಹರ್ಷಿಯು ಬಂದನು. ಅವರಿವರೆನ್ನದೆ ಸಿಕ್ಕಿದವರನ್ನೆಲ್ಲ ಸುಲಿಗೆ ಮಾಡುತ್ತಿದ್ದ ಡಕಾಯಿತನು ನಾರದನ ಮೇಲೆಯೂ ಬಿದ್ದನು.

ನಾರದನು ಅವನನ್ನು ತಡೆದು "ಅಯ್ಯಾ! ನನ್ನನ್ನು ಯಾಕೆ ಸುಲಿಯು ತ್ತೀಯೆ? ಕಂಡವರನ್ನು ಕೊಂದು ಸುಲಿಗೆ ಮಾಡುವುದು ಪಾಪವಲ್ಲವೆ?" ಎಂದು ಕೇಳಿದನು.

ಕಳ್ಳನಿಗೆ ಅದು ಪಾಪವೆಂದು ಕಂಡಿರಲಿಲ್ಲ. ಅವನು "ನಾನು ಹೀಗೆ ಕಳ್ಳತನ ಮಾಡದಿದ್ದರೆ ನನ್ನ ಸಂಸಾರ ಪಥ ಜರಗುವುದು ಹೇಗೆ?" ಎಂದನು.

"ನಿನ್ನ ಸಂಸಾರವು ನಿನ್ನ ಸಂಪಾದನೆಯನ್ನು ಹಂಚಿಕೊಳ್ಳುವಂತೆ ನಿನ್ನ ಪಾಪವನ್ನೂ ಹಂಚಿಕೊಳ್ಳುವುದೆ?"

ಕಳ್ಳನು ತನ್ನ ಪಾಪವನ್ನು ತನ್ನಸಂಸಾರವೂ ಹಂಚಿಕೊಳ್ಳುವುದೆಂದನು.

ಆಗ ನಾರದನು "ಅಯ್ಯಾ! ನನ್ನನ್ನು ಈ ಮರಕ್ಕೆ ಬಿಗಿದಿಡು. ನಾನು ಏನೂ ಓಡಿಹೋಗುವುದಿಲ್ಲ ನೀನು ಮನೆಗೆ ಹೋಗಿ, ನಿನ್ನ ತಂದೆ ತಾಯಿ ಹೆಂಡತಿ ಮಕ್ಕಳು ನಿನ್ನ ಪಾಪದಲ್ಲಿ ಭಾಗಿಗಳಾಗುವರೆ ಎಂದು ವಿಚಾರಿಸಿ ಬಾ. ನೀನು ತಂದ ಹಣವನ್ನು ಹಂಚಿಕೊಳ್ಳುವಂತೆ ನಿನ್ನ ಪಾಪವನ್ನೂ ಹಂಚಿ ಕೊಳ್ಳುವರೆ ಎಂದು ಕೇಳಿ ಬಾ." ಎಂದನು.

ಕಳ್ಳನು ಅದೇ ರೀತಿ ನಾರದನನ್ನು ಬಳಿಯ ಮರಕ್ಕೆ ಬಿಗಿದು, ಮೊದಲು ತನ್ನ ತಾಯ ಬಳಿ ಹೋದನು.

"ಅಮ್ಮ! ನಿಮ್ಮನ್ನು ಪಾಲಿಸಲು, ನಾನು ಹೇಗೆ ಸಂಪಾದಿಸುವೆನು ಗೊತ್ತೆ?"

"ಇಲ್ಲವಪ್ಪ!"

"ನಾನು ಕಂಡವರನ್ನು ಕೊಲೆ ಮಾಡಿ, ಸುಲಿಗೆಯಿಂದ ಸಂಪಾದಿಸುವೆನು."

"ಛೆ! ಛೆ! ಎಂತಹ ಪಾಪದ ಕೆಲಸ!"

"ಆದರೆ, ಅಮ್ಮ! ನನ್ನ ಸಂಪಾದನೆಯನ್ನು ಹಂಚಿಕೊಂಡಂತೆ ನೀವು ನನ್ನ ಪಾಪವನ್ನೂ ಹಂಚಿಕೊಳ್ಳುವಿರಲ್ಲವೆ?"

"ನಿನ್ನ ಪಾಪಕ್ಕೂ ನಮಗೂ ಎಲ್ಲಿಯ ಸಂಬಂಧ? ನಾನೇನೂ ಕೊಲೆ ಮಾಡಿಲ್ಲ, ಕಳ್ಳತನ ಮಾಡಿಲ್ಲ."

ಕಳ್ಳನು ತಂದೆಯ ಬಳಿ ಹೋದನು. ತಂದೆಯು ಮಗನ ಸಂಪಾದನೆಯ ರೀತಿಯನ್ನು ಕೇಳಿ ಅಸಹ್ಯಗೊಂಡು "ಪಾಪಿ! ಚಂಡಾಲ! ಕೊಲೆ ಮಾಡಿ ನನಗೆ ಮುಖ ತೋರಿಸುವೆಯ? ತೊಲಗತ್ತ!" ಎಂದು ಛೀಮಾರಿ ಮಾಡಿ ಅಟ್ಟಬಿಟ್ಟನು.

ಕಳ್ಳನ ಹೆಂಡತಿಯು ಗಂಡನ ವೃತ್ತಿಯನ್ನೂ ಅವನ ಪ್ರಶ್ನೆಯನ್ನೂ ಕೇಳಿ, "ನಿನ್ನ ಪಾಪದಲ್ಲಿ ನನಗೇನು ಪಾಲು ಬಂತು? ನೀನು ನನ್ನ ಗಂಡ; ನನ್ನನ್ನು ಕಾಪಾಡುವುದು ನಿನ್ನ ಕರ್ತವ್ಯ" ಎಂದುಬಿಟ್ಟಳು.

ಕಳ್ಳನಿಗೆ ಆಗ ಅರ್ಥವಾಯಿತು—ತಾನು ಯಾರಿಗಾಗಿ ಕೊಲೆ ಕಳ್ಳತನಗಳನ್ನು ಆಶ್ರಯಿಸಿದನೋ ಅವರು ಕೂಡ ತನ್ನ ಪಾಪದಲ್ಲಿ ಭಾಗಿಗಳಾಗರು—ಎಂದು. ಹೀಗೆ ಕಣ್ಣು ಕಂಡಾಗ, ನಾರದನನ್ನು ಕಟ್ಟಿಹಾಕಿದ್ದ ಬಳಿಗೆ ಬಂದು, ಅವನ ಕಟ್ಟುಗಳನ್ನು ಬಿಚ್ಚಿ, ಅವನ ಕಾಲಿಗೆರಗಿದನು. ಎರಗಿ, "ಮಹಾತ್ಮಾ! ನಿಜಸ್ಥಿತಿಯು ಈಗ ನನಗೆ ಗೊತ್ತಾಯಿತು. ಇಷ್ಟು ದಿನವೂ ಅರಿಯದೆ ತಪ್ಪು ಮಾಡಿದೆನು. ಉದ್ಧಾರವಾಗುವ ದಾರಿದೋರಿ ನನ್ನನ್ನು ಕಾಪಾಡಬೇಕು" ಎಂದು ಅಂಗಲಾಚಿ ಬೇಡಿದನು.

ನಾರದ ಮಹರ್ಷಿಯು ಅವನನ್ನು ಕಂಡು ಮರುಗಿ, ಅವನ ಶ್ರೇಯಸ್ಸಿಗೆ ದಾರಿಯಾಗುವಂತೆ ಉಪದೇಶ ಮಾಡಿದನು. ಕಳ್ಳನು ಆತನ ಉಪದೇಶದಂತೆ ಮನೆಮಠಗಳನ್ನು ಬಿಟ್ಟು, ವಿರಕ್ತನಾಗಿ ಕಾಡಿಗೆ ಹೋದನು. ಅಲ್ಲಿ ನಾರದನು ಹೇಳಿಕೊಟ್ಟಂತೆ ಪೂಜೆ, ಪ್ರಾರ್ಥನೆ, ಧ್ಯಾನಗಳಲ್ಲಿ ನಿರತನಾಗಿದ್ದನು. ಒಂದು ಸಲ ಧ್ಯಾನಮಗ್ನನಾಗಿರುವಾಗ, ಮೈಮೇಲೆ ಎಚ್ಚರವಿಲ್ಲದಿರುವಾಗ, ಗೆದ್ದಲುಹುಳುಗಳು ಅವನ ಮೈ ಮುತ್ತಿ, ಸುತ್ತಲೂ ಹುತ್ತ ಕಟ್ಟಿದುವು. ಆದರೂ

ಅವನಿಗೆ ಮೈಮೇಲೆ ಅರಿವೇ ಇರಲಿಲ್ಲ. ಅನೇಕ ವರ್ಷಗಳು ಕಳೆದನಂತರ "ಎದ್ದೇಳು, ಓ ಮಹರ್ಷಿ!" ಎಂದು ಆಕಾಶವಾಣಿಯಾಯಿತು. ಕಳ್ಳನಾಗಿದ್ದು ಧ್ಯಾನಮಾಡುತ್ತ ಹುತ್ತದಲ್ಲಿ ಹೂತು ಹೋದವನಿಗೆ ಆ ವಾಣಿ ಕೇಳಿ ಎಚ್ಚರ ವಾಯಿತು; ಅಚ್ಚರಿಯಾಯಿತು. "ಮಹರ್ಷಿ ಯಾರು? ಕಳ್ಳನು ನಾನು" ಎಂದುಕೊಂಡನು. ಅದಕ್ಕಾ ವಾಣಿಯು "ಓ ಮಹರ್ಷಿ! ನೀನು ಕಳ್ಳನಲ್ಲ. ಕಳ್ಳತನದ ಕೊಳೆಯನ್ನು ಕಳೆದ ಪಾವನ ಮುನಿ ನೀನು. ನಿನ್ನ ಹಳೆಯ ಬಾಳು ಹೋಯಿತು. ಮೈ ಸುತ್ತ ಈ ಹುತ್ತವು, ಈ ವಲ್ಮೀಕವು, ಎದ್ದುದೂ ತಿಳಿಯಲಾರದಂತಹ ಧ್ಯಾನದಲ್ಲಿ ನೀನು ಮುಳುಗಿ, ಪವಿತ್ರನಾಗಿರುವೆ. ಈಗ ಈ ವಲ್ಮೀಕದಲ್ಲಿ ಹುಟ್ಟಿಬಂದಿರುವೆಯಾಗಿ, ನೀನು ವಾಲ್ಮೀಕಿಯೆಂದು ಹೆಸ ರಾಗುವೆ" ಎಂದು ಅವನನ್ನು ಸಂತೋಷಗೊಳಿಸಿತು.

ಕಳ್ಳನಾಗಿದ್ದವನು ವಾಲ್ಮೀಕಿ ಮಹರ್ಷಿಯಾದನು.

ಒಂದು ಸಲ, ವಾಲ್ಮೀಕಿ ಮಹರ್ಷಿಯು ಸ್ನಾನ ಮಾಡುವುದಕ್ಕಾಗಿ ಗಂಗಾನದಿಗೆ ಹೋಗುತ್ತಿದ್ದನು. ದಾರಿಯಲ್ಲಿ ಒಂದು ಮರದ ಮೇಲೆ ಎರಡು ಕ್ರೌಂಚಪಕ್ಷಿಗಳು ಪ್ರೇಮದಿಂದ ವಿಹರಿಸುತ್ತಿದ್ದುವು. ವಾಲ್ಮೀಕಿಯು ಆ ಮನೋಹರ ದೃಶ್ಯವನ್ನು ಕಂಡು ಆನಂದಪಡುತ್ತಿದ್ದಾಗ, ಒಂದು ಬಾಣವು ಹಾರಿಬಂದು ಆ ಕ್ರೌಂಚದಂಪತಿಗಳಲ್ಲಿ ಗಂಡನ್ನು ಕೊಂದು ಕೆಡವಿತು. ಗಂಡಿನ ಸಾವನ್ನು ಕಂಡು, ಹೆಣ್ಣು, ಕೇಳಿದವರ ಕರುಳು ಕರಗುವಂತೆ ಕೂಗ ತೊಡಗಿತು. ಆ ಗಂಡಿನ ಸಾವನ್ನೂ ಹೆಣ್ಣಿನ ಗೋಳಾಟವನ್ನೂ ಅದಕ್ಕೆ ಕಾರಣನಾಗಿ ಎದುರಿಗೆ ಬಂದ ಪಾಪಿ ವ್ಯಾಧನನ್ನೂ ಕಂಡು, ವಾಲ್ಮೀಕಿಯು ಮರುಕಗೊಂಡು, ದುಃಖದಿಂದ ಮೈಮರೆತು "ಎಲೆ ಬೇಡ! ಮೋಹದಲ್ಲಿ ಮುಳುಗಿದ್ದ ಈ ಕ್ರೌಂಚಗಳಲ್ಲಿ ಒಂದನ್ನು ನೀನು ಕೊಂದೆ. ಅದರಿಂದ ನೀನು ಬಹುಕಾಲ ಬದುಕಲಾರೆ" ಎಂದನು. ಹೀಗೆ ಮೈಮರೆತು ಹೇಳುವಾಗ, ಹೇಳಿದ ಮಾತು ತಾಳಲಯಬದ್ಧವಾಗಿ ಪದ್ಯರೂಪವಾಗಿ ಹರಿಯಿತು.

"ಮಾ ನಿಷಾದ ಪ್ರತಿಷ್ಠಾಂ ತ್ವಮಗಮಶ್ಶಾಶ್ವತೀಸ್ಸಮಾಃ |
ಯತ್ ಕ್ರೌಂಚಮಿಥುನಾದೇಕಮವಧೀಃ ಕಾಮಮೋಹಿತಂ ||"

ತನ್ನ ಮಾತಿನ ಶ್ಲೋಕರೂಪವನ್ನು ಕಂಡು ವಾಲ್ಮೀಕಿಗೆ ಆಶ್ಚರ್ಯ ವಾಯಿತು. ಸ್ನಾನಘಟ್ಟಕ್ಕೆ ನಡೆಯುವಾಗ, ಸ್ನಾನ ಮಾಡುವಾಗ, ಆಶ್ರಮಕ್ಕೆ

ಮರಳಿ ಪೂಜಾದಿಗಳನ್ನು ನೆರವೇರಿಸುವಾಗ, ಅವನ ಮನಸ್ಸಿನಲ್ಲಿ ಎರಡು ವಿಷಯಗಳು ತಾವೇ ತಾವಾಗಿ ಕುಣಿಯುತ್ತಿದ್ದುವು. ಒಂದು, ತಾನು ಕಂಡ ಆ ಕ್ರೌಂಚದ ಮರಣ. ಇನ್ನೊಂದು, ಆ ವ್ಯಾಧನಿಗೆ ತಾನು ನುಡಿದ ಮಾತಿನ ಶ್ಲೋಕರೂಪ.

ಹೀಗೆ ಯಾವಾಗಲೂ ಆ ಹೊಸ ಶ್ಲೋಕರೂಪವನ್ನು ಮೇಲಿಂದ ಮೇಲೆ ಧ್ಯಾನಮಾಡುತ್ತಿದ್ದ ವಾಲ್ಮೀಕಿಗೆ, ಒಂದು ದಿನ ಲೋಕಪಿತಾಮಹನಾದ ಬ್ರಹ್ಮನು ಪ್ರತ್ಯಕ್ಷನಾದನು. ವಾಲ್ಮೀಕಿಯು ಆತನಿಗೆ ಮಾಡಬೇಕಾದ ಅರ್ಘ್ಯ ಪಾದ್ಯಾದಿ ಸತ್ಕಾರಗಳನ್ನೆಲ್ಲ ಸಾಂಗವಾಗಿ ಭಕ್ತಿಪೂರ್ವಕ ನಡೆಸಿ, ಆತನು ಆಸನದಲ್ಲಿ ಕುಳಿತ ಮೇಲೆ ಅವನೆದುರು ತಾನೂ ಕುಳಿತನು ಆಗ ಕೂಡ ತಾನು ಮಾತನಾಡಿದ ಶ್ಲೋಕವನ್ನೇ ಕುರಿತು ನೆನೆಯುತ್ತಿದ್ದನು. ಆತನ ಮನಸ್ಸನ್ನು ತಿಳಿದು, ಬ್ರಹ್ಮನು, ವಾಲ್ಮೀಕಿಯು ನುಡಿದ ಮಾತು ಶ್ಲೋಕರೂಪ ವಾದುದೇ ಹೌದೆಂದು ತಿಳಿಸಿ, ಅಂತಹ ಶ್ಲೋಕಗಳಲ್ಲಿಯೇ ಶ್ರೀ ರಾಮಚಂದ್ರನ ಚರಿತ್ರೆಯನ್ನು ರಚಿಸಿ ಲೋಕೋಪಕಾರ ಮಾಡಬೇಕೆಂದು ಸೂಚಿಸಿದನು. ಅಲ್ಲದೆ ಆ ಕಾವ್ಯವು ಲೋಕವಿಖ್ಯಾತವಾಗಿ ಸಕಲ ಜನರನ್ನೂ ಆನಂದಪಡಿಸ ಲೆಂದೂ ಹರಸಿದನು. ತಾನು ಶ್ಲೋಕವೆಂದುಕೊಂಡುದು ಶ್ಲೋಕವೇ ಹೌದೆಂದು ತಿಳಿದು ವಾಲ್ಮೀಕಿಗೆ ಹರ್ಷವಾಯಿತು. ಆತನು ಬ್ರಹ್ಮನ ಸೂಚನೆ ಯನ್ನು ಆಜ್ಞೆಯೆಂದು ಭಾವಿಸಿ, ಆತನ ಹರಕೆಯ ಬಲದಿಂದ ಸಂಪೂರ್ಣ ರಾಮಾಯಣವನ್ನು ಅನೇಕ ಶ್ಲೋಕಗಳಲ್ಲಿ ರಚಿಸಿ ಮುಗಿಸಿದನು.

ಶ್ರೀ ರಾಮಚಂದ್ರನ ಚರಿತ್ರರೂಪವಾದ ಆ ರಾಮಾಯಣವು ಆದಿ ಕಾವ್ಯವೆನಿಸಿತು. ಅದನ್ನು ರಚಿಸಿದ ವಾಲ್ಮೀಕಿ ಮಹರ್ಷಿಯು ಆದಿಕವಿ ಎನಿಸಿಕೊಂಡನು.

---

# ರಾ ಮಾ ವ ತಾ ರ

ಹಿಂದೆ ತ್ರೇತಾಯುಗದಲ್ಲಿ ಕೋಸಲವೆಂಬ ರಾಜ್ಯವಿತ್ತು. ಅದರ ರಾಜಧಾನಿಯಾದ ಅಯೋಧ್ಯೆಯು ಸರಯೂ ನದೀ ತೀರದಲ್ಲಿ ಸಕಲ ಸಂಪತ್ಸಮೃದ್ಧವಾಗಿ ರಾಜಿಸುತ್ತಿತ್ತು. ಅಲ್ಲಿಯ ನಿತ್ಯಸುಖಿಗಳಾದ ಪ್ರಜೆಗಳನ್ನು ದಶರಥನೆಂಬ ಅರಸು ಪಾಲಿಸುತ್ತಿದ್ದನು. ಅವನು ಇಕ್ಷ್ವಾಕು ವಂಶದ ದೊರೆಗಳಲ್ಲಿ ಬಹಳ ಹೆಸರಾದವನು. ಆತನು ಮಹಾತ್ಮನು, ವೀರವರನು, ದಾನಿ, ಧರ್ಮಿ. ಪರಾಕ್ರಮ ಸಿಂಹನಾದ ಅರಸನಂತೆಯೇ ಪ್ರಜೆಗಳೆಲ್ಲರೂ ಪರಾಕ್ರಮಿಗಳಾಗಿದ್ದರು. ಅವರು ಯುದ್ಧದಲ್ಲಿ ಯಾರಿಗೂ ಸೋತವರಲ್ಲವಾದುದರಿಂದ ಅವರ ನಗರಕ್ಕೆ ಅಯೋಧ್ಯೆಯೆಂಬುದು ಅನ್ವರ್ಥ ನಾಮವಾಗಿತ್ತು. ಸಕಲ ಸದ್ಗುಣಗಳಲ್ಲಿಯೂ ಜನರು ಅರಸನ ಪ್ರತಿಬಿಂಬವಂತೆ ಇದ್ದರು.

ಅರಸನು ಸಕಲ ಸದ್ಗುಣಗಳ ಗಣಿಯು. ಪ್ರಜೆಗಳು ಅರಸನಿಗೆ ಅನುರೂಪರಾದವರು. ಅಂತಹ ಅರಸನ ಪ್ರಜೆಗಳ ಸನ್ನಿಧಿಯಿಂದ ಕಳೆ ಹೊಂದಿದ ನಾಡು ದೇವೇಂದ್ರನ ಅಮರಾವತಿಗೆ ಸಾಟಿಯಾಗಿತ್ತು. ಸಚಿವರು, ಪುರೋಹಿತರು, ವೀರ ಯೋಧರು, ವಂದಿಮಾಗಧರು ಮುಂತಾದ ಪರಿವಾರಕ್ಕೆ ಆಸ್ಥಾನದಲ್ಲಿ ಕೊರತೆಯಿರಲಿಲ್ಲ. ಕೌಸಲ್ಯೆ, ಕೈಕೇಯಿ, ಸುಮಿತ್ರೆ ಎಂಬ ಮೂವರು ಅರಸಿಯರು ದಶರಥನ ಸುಖಸೌಧಕ್ಕೆ ಕಳಶವಿದ್ದಂತೆ ಇದ್ದರು. ಇಷ್ಟೆಲ್ಲ ಭೋಗಭಾಗ್ಯಗಳಿದ್ದರೂ ಅರಸನ ಮನಸ್ಸಿಗೆ ನೆಮ್ಮದಿಯಿರಲಿಲ್ಲ. ದಶರಥನಿಗೆ ಮಕ್ಕಳು ಇರಲಿಲ್ಲ. ಆ ಕೊರತೆಯೇ ಅವನಿಗೆ ದೊಡ್ಡ ದುಃಖವಾಗಿತ್ತು.

ಅರಸನ ಚಿಂತೆಯನ್ನು ನೋಡಿ, ಸಚಿವರು ಕೆಲವರು, ಅವನ ಪ್ರಶ್ನೆಗಳಿಗೆ ತಕ್ಕ ಉತ್ತರಕೊಡುತ್ತ, ಅಶ್ವಮೇಧ ಯಾಗವು ಫಲದಾಯಕವೆಂದು ಸೂಚಿಸಿದರು. ಅರಸನು ಅವರ ಸೂಚನೆಯನ್ನು ಅಂಗೀಕರಿಸಿ ಯಜ್ಞ ಮಾಡಲು ನಿಶ್ಚಯಿಸಿದನು. ಅಶ್ವಮೇಧ ಯಾಗವು ಕಷ್ಟತಮವೆಂದು ಅರಸನಿಗೂ ಗೊತ್ತಿತ್ತು; ಸಚಿವರಿಗೂ ಗೊತ್ತಿತ್ತು. ಯಾಗ ಸಮಯದಲ್ಲಿ ಏನಾದರೂ ಸ್ವಲ್ಪ ದೋಷ ತಲೆದೋರಿದರೆ, ಒಂದು ಲೇಶ ಲೋಪವಾದರೆ,

ಯಜ್ಞವೇ ಕೆಟ್ಟುಹೋದೀತು. ಅಂತಹ ಸಮಯ ಸಿಕ್ಕಿದರೆ ಸಾಕೆಂದು ಕಾದು ಕುಳಿತಿರುವ ರಾಕ್ಷಸರು ಯಜಮಾನನಾದ ದಶರಥನನ್ನೇ ಧ್ವಂಸ ಮಾಡಿಯಾರು. ಆದರೂ ಅದು ಮಾಡಬೇಕಾದ ಯಜ್ಞ; ಪುತ್ರಾರ್ಥಿಯಾ ದವನು ಮಾಡಲೇಬೇಕಾದ ಯಜ್ಞ. ಅದರಿಂದ ಪ್ರೀತರಾಗಿ ದೇವತೆಗಳು ಏನು ಬೇಕಾದರೂ ವರ ಕೊಟ್ಟಾರು. ಅದರಿಂದ ಯಜ್ಞ ಕೆಡದಂತೆ, ದೋಷ ಬರದಂತೆ, ಲೋಪವಾಗದಂತೆ, ಕೈಕೊಂಡುದು ಸಾಂಗವಾಗಿ ಕೊನೆ ಮುಟ್ಟು ವಂತೆ ನಡೆಸಲು ತಕ್ಕ ಪುರೋಹಿತನು ಬೇಕು ಅಂತಹ ಪುರೋಹಿತನು ಯಾರೆಂದು ದೊರೆಯೂ ಮಂತ್ರಿಗಳೂ ಯೋಚಿಸಿ ನೋಡಿದರು. ರೋಮ ಪಾದನ ಅಳಿಯನೂ ಶಾಂತಾದೇವಿಯ ಪತಿಯೂ ಆದ ಋಷ್ಯಶೃಂಗನಲ್ಲದೆ ಬೇರೆಯವರಿಂದ ಯಜ್ಞವು ಪರಿಸಮಾಪ್ತಿಯಾಗಲಾರದೆಂದು ನಿರ್ಧರಿಸಿ ದಶ ರಥನು ತಾನೇ ಹೋಗಿ ಆತನನ್ನು ಆಹ್ವಾನಿಸಿದನು. ಋಷ್ಯಶೃಂಗನು ಒಪ್ಪಿ ಅಯೋಧ್ಯೆಗೆ ಬಂದನು.

ಯಜ್ಞಸನ್ನಾಹಗಳೆಲ್ಲವೂ ಸಿದ್ಧವಾದುವು. ಯಜ್ಞಾಶ್ವವನ್ನು ವಿಧಿ ಪೂರ್ವಕವಾಗಿ ಪೂಜಿಸಿ, ಅಲಂಕರಿಸಿ, ದೇಶದೇಶಗಳನ್ನು ಸುತ್ತಿಬರಲೆಂದು ಕಾವಲು ಕೊಟ್ಟು ಕಳುಹಿಸಿದರು. ಇದು ಅಶ್ವಮೇಧಯಾಗದಲ್ಲಿ ನಡೆಸಿಯೇ ತೀರಬೇಕಾದ ಒಂದು ಕರ್ಮ. ಹೀಗೆ ದ್ವಿಗ್ವಿಜಯಕ್ಕೆ ಕಳುಹಿಸಿದ ಕುದು ರೆಯು ಒಂದು ವರುಷದ ವರೆಗೆ ಎಲ್ಲಿ ಬೇಕಾದರಲ್ಲಿಗೆ ಹೋಗಿ ಬರುವುದು. ಕುದುರೆಯು ಹೋದ ದೇಶದವರು ಯಾರಾದರೂ ಅದನ್ನು ಕಟ್ಟಿಹಾಕಿದರೆ, ಅವರು ಕುದುರೆಯ ಕಾವಲಿನ ದಶರಥನ ಸೈನ್ಯವನ್ನು ಸೋಲಿಸಬೇಕು. ಇಲ್ಲವೆ, ದಶರಥನಿಗೆ ಕಪ್ಪಕಾಣಿಕೆ ಕೊಟ್ಟು, ತಮ್ಮ ಅಧೀನತೆಯನ್ನು ಒಪ್ಪಿ ಕೊಂಡು, ಅಶ್ವಮೇಧಕ್ಕೆ ನೆರವಾಗಬೇಕು. ದಶರಥನಿಗೆ ಎದುರು ನಿಲ್ಲಬಲ್ಲ ರಾಜರು ಯಾರೂ ಇರಲಿಲ್ಲವಾದುದರಿಂದ, ದಿಗ್ವಿಜಯಕ್ಕೆ ಹೊರಟ ಯಜ್ಞಾ ಶ್ವವು ವರುಷವು ಮುಗಿಯುವ ವೇಳೆಗೆ ದಿಗ್ವಿಜಯವನ್ನು ಮುಗಿಸಿಕೊಂಡು ಅಯೋಧ್ಯೆಗೆ ಹಿಂದಿರುಗಿ ಬಂತು. ಆಗ ಸರಯೂ ನದೀ ತೀರದಲ್ಲಿನ ಯಾಗ ಶಾಲೆಯಲ್ಲಿ ಅಶ್ವಮೇಧವು ವಿಧಿಪೂರ್ವಕವಾಗಿ ನಡೆಯಿತು. ಪಟ್ಟದ ರಾಣಿ ಯಾದ ಕೌಸಲ್ಯೆಯು ಮೂರು ಏಟಿನಿಂದ ಯಜ್ಞಪಶುವನ್ನು ಕೊಂದಳು. ವಿಧಿಯಂತೆ ರಾತ್ರಿಯೆಲ್ಲ ಅದರ ಪಕ್ಕದಲ್ಲಿ ಕಾವಲು ಮಲಗಿ, ಮಾರನೆಯ ದಿನ

ದೇವತೆಗಳ ಪ್ರೀತಿಯಾಗಲೆಂದು, ಅದನ್ನು ಯಜ್ಞಕುಂಡಕ್ಕೆ ಸಮರ್ಪಿಸಿದಳು.

ಹೀಗೆ ಯಜ್ಞವಾದ ಮೇಲೆ, ದಶರಥನು ಪುತ್ರಕಾಮೇಷ್ಟಿ ಎಂಬ ಯಾಗವನ್ನೂ ಮಾಡಬೇಕೆಂದು ತಿಳಿಸಿ, ಋಷ್ಯಶೃಂಗನು ಶಾಸ್ತ್ರೋಕ್ತವಾಗಿ ಆ ಯಾಗವನ್ನು ಆರಂಭಿಸಿದನು.

ಯಾಗವಾಗುತ್ತಿದ್ದಾಗ ಅಲ್ಲಿಯ ಹವಿಸ್ಸನ್ನು ಸ್ವೀಕರಿಸಲು ಬ್ರಹ್ಮನೂ ಇನ್ನಿತರ ದೇವತೆಗಳೂ ತಾವೇ ಬಂದರು. ಬಂದಾಗ, ದೇವತೆಗಳೆಲ್ಲರೂ ಒಟ್ಟಾಗಿ ಬಂದು, ಬ್ರಹ್ಮವರಪ್ರಸಾದ ಬಲದಿಂದ ರಾವಣನೆಂಬ ರಾಕ್ಷಸನು ತಮ್ಮನ್ನು ಪೀಡಿಸುತ್ತಿರುವುದನ್ನು ಕುರಿತು, ಬ್ರಹ್ಮನಲ್ಲಿ ಮೊರೆಯಿಟ್ಟರು. ಆ ರಾವಣನು ಹಿಂದೆ ಬ್ರಹ್ಮನನ್ನು ಕುರಿತು ದೀರ್ಘಕಾಲ ತಪಸ್ಸು ಮಾಡಿ, ದೇವ ದಾನವ ಯಕ್ಷ ರಾಕ್ಷಸ ಗಂಧರ್ವರು ಯಾರಿಂದಲೂ ತನಗೆ ಮರಣವಾಗ ಬಾರದೆಂದು ವರ ಪಡೆದನು. ಆ ವರದ ಬಲದಿಂದ ಕೊಬ್ಬಿ ಇಂದ್ರಾದಿ ದೇವತೆಗಳೆಲ್ಲರನ್ನೂ ಪೀಡಿಸಿ ತ್ರೈಲೋಕ್ಯ ವೀರನೆನಿಸಿಕೊಂಡನು. ಬ್ರಹ್ಮನಿಂದ ತನಗೆ ಅಮರತ್ವದ ವರ ಬಂದುದಕ್ಕೆ ಮದಾಂಧನಾಗಿ, ರಾವಣನು ಯಾರನ್ನೂ ಹಾಯಾಗಿ ಬಾಳಗೊಡುತ್ತಿರಲಿಲ್ಲ ಹೀಗೆ ತಾನು ಕೊಟ್ಟ ವರದಿಂದ ತನ್ನವರಿಗೆಯೆ ಹಾನಿಯಾಗುತ್ತಿರುವುದನ್ನು ಕೇಳಿ, ಬ್ರಹ್ಮನು, ಅದಕ್ಕೆ ನಿವಾರಣೆಯನ್ನು ಯೋಚಿಸಿದನು. ಯೋಚಿಸಿ, 'ದುರಾತ್ಮನಾದ ರಾವಣನು ದೇವ ದಾನವ ಯಕ್ಷ ರಾಕ್ಷಸ ಗಂಧರ್ವರು ತನ್ನನ್ನು ಕೊಲ್ಲಬಾರದೆಂದನಲ್ಲದೆ, ಮನುಷ್ಯರು ತನ್ನನ್ನು ಕೊಲ್ಲಬಾರದೆಂದು ಕೇಳಲಿಲ್ಲ. ಆದುದರಿಂದ ಅವನು ಸಾಯಬೇಕಾದರೆ ಮನುಷ್ಯನಿಂದಲ್ಲದೆ ಬೇರೆಯವರಿಂದ ಸಾಧ್ಯವಿಲ್ಲ' ಎಂದನು. ಆ ವೇಳೆಗೆ ಸರಿಯಾಗಿ ಯಾಗಶಾಲೆಗೆ ಶ್ರೀವಿಷ್ಣುವೂ ಬಂದನು. ಬ್ರಹ್ಮನೂ ಇತರ ದೇವತೆಗಳೂ ವಿಷ್ಣುವಿಗೆ ರಾವಣನ ಹಾವಳಿಯನ್ನೂ, ಅವನ ವಧೆಗೆ ತಮ್ಮ ಉಪಾಯವನ್ನೂ ತಿಳಿಸಿ, ಮೊರೆಯಿಟ್ಟರು. ಅವನೇ ಮನುಷ್ಯರೂಪದಲ್ಲಿ ಹುಟ್ಟಿ ರಾವಣನನ್ನು ಸಂಹರಿಸಬೇಕೆಂದು ವಿಧವಿಧವಾಗಿ ಪ್ರಾರ್ಥಿಸಿದರು. ಶರಣಾಗತರನ್ನು ಎಂದೂ ಕೈ ಬಿಡದ ವಿಷ್ಣುವು ದೇವತೆಗಳ ಪ್ರಾರ್ಥನೆಗೆ ಒಪ್ಪಿದನು. 'ದಶರಥನು ಈಗ ಪುತ್ರಕಾಮೇಷ್ಟಿ ಯಾಗ ಮಾಡುತ್ತಿರುವನು. ರಾವಣನ ವಧೆಗೋಸ್ಕರ ಮನುಷ್ಯನಾಗಿ ಹುಟ್ಟಲು ಇವನ ವಂಶದಂತಹ ವಂಶವಿನ್ನಿಲ್ಲ. ಇವನ ಮೂವರು ಪತ್ನಿಯರಲ್ಲಿ ನಾನೇ ನಾಲ್ಕು ಮಕ್ಕಳಾಗಿ

ಜನಿಸುವೆನು. ಲೋಕಕಂಟಕನಾದ ರಾವಣನನ್ನು ನಿರ್ಮೂಲ ಮಾಡುವೆನು. ನಿರ್ಭಯರಾಗಿರಿ' ಎಂದು ಅಭಯಕೊಟ್ಟನು. ಮಹಾ ವಿಷ್ಣುವಿನ ಆಶ್ರಿತ ವತ್ಸಲತೆಯನ್ನೂ, ಶಿಷ್ಟಪರಿಪಾಲನೆಯ ಉತ್ಸಾಹವನ್ನೂ ಕಂಡ ದೇವತೆಗಳು ಕೆಲವರು, ವಿಷ್ಣುವು ಮನುಷ್ಯನಾದಾಗ ಅವನ ಸಹಾಯಾರ್ಥವಾಗಿ ತಾವು ವಾನರರಾಗಿ ಹುಟ್ಟುವೆವೆಂದು ನಿಶ್ಚಯಿಸಿಕೊಂಡರು.

ಇತ್ತ ವಿಷ್ಣುವಿನ ಅಭಯಪ್ರದಾನವಾಯಿತು. ಅತ್ತ ಯಾಗವೂ ಕೊನೆಗಾಣುತ್ತ ಬಂತು. ಆಗ ಯಜ್ಞಕುಂಡದಿಂದ ತೇಜೋಮಯನಾದ ಮಹಾಪುರುಷನೊಬ್ಬನು ಆವಿರ್ಭವಿಸಿದನು. ಅವನ ಎರಡೂ ಕೈಗಳಲ್ಲಿ ಒಂದು ಪಾಯಸದ ಕಲಶವಿತ್ತು. ಆ ಪುರುಷನು ಕಲಶವನ್ನು ದಶರಥನಿಗೆ ಕೊಟ್ಟು "ಮಹಾರಾಜ! ಈ ಕಲಶದಲ್ಲಿರುವ ಪಾಯಸವನ್ನು ನಿನ್ನ ಮೂವರು ರಾಣಿಯರಿಗೂ ಹಂಚಿಕೊಡು. ನಿನ್ನ ಪುತ್ರಕಾಮೇಷ್ಟಿ ಯಾಗದಿಂದ ತೋಷಗೊಂಡ ದೇವತೆಗಳು ನಿನಗೆ ನಾಲ್ವರು ಕುಮಾರರನ್ನು ಅನುಗ್ರಹಿಸುವರು. ಅವರು ಅಸಮವೀರರಾಗಿ, ಸರ್ವಲೋಕ ವಿಜಯಿಗಳಾಗಿ, ಅನನ್ಯ ಸಾಮಾನ್ಯ ಸಕಲ ಗುಣಯುತರಾಗಿ ರಾಜಿಸುವರು. ಅವರ ಯಶಸ್ಸು ಆಚಂದ್ರಾರ್ಕ ಸ್ಥಾಯಿಯಾಗಿರುವುದು." ಎಂದು ನುಡಿದು ಅಂತರ್ಧಾನನಾದನು.

ದಶರಥನ ಆನಂದ ಹೇಳತೀರದು. ಪಾಯಸದ ಪಾತ್ರೆಯನ್ನು ಪ್ರಾಣಕ್ಕಿಂತ ಹೆಚ್ಚಾಗಿ ಕಂಡು, ಭಕ್ತಿಯಿಂದ ಅದನ್ನು ಹಿಡಿದು ಅಂತಃಪುರಕ್ಕೆ ಹೋದನು. ಹಿರಿಯ ರಾಣಿಯಾದ ಕೌಸಲ್ಯೆಗೆ ಪಾಯಸದ ಅರ್ಧ ಭಾಗ ಕೊಟ್ಟನು. ಉಳಿದುದರಲ್ಲಿ ಅರ್ಧವನ್ನು ಸುಮಿತ್ರೆಗೆ ಕೊಟ್ಟು, ಮಿಕ್ಕುದರಲ್ಲಿ ಅರ್ಧಮಾಡಿ ಕಿರಿಯ ರಾಣಿಯಾದ ಕೈಕೇಯಿಗೆ ಕೊಟ್ಟನು. ಕೈಕೇಯಿಗಿಂತ ಸುಮಿತ್ರೆಯು ಹಿರಿಯವಳಾದುದರಿಂದ ಕಡೆಗೆ ಹಂಚಿ ಉಳಿದ ಪಾಯಸವು ಸುಮಿತ್ರೆಯ ಪಾಲಿಗೆ ಬಂತು. ಹೀಗೆ ದೇವದತ್ತವಾದ ಪಾಯಸವನ್ನು ಸವಿದು ಮೂವರು ರಾಣಿಯರೂ ಗರ್ಭವತಿಯರಾದರು.

ಗರ್ಭವತಿಯರಾದ ಅರಸಿಯರು ಸಕಾಲದಲ್ಲಿ ಪುತ್ರವತಿಯರಾದರು. ಕೌಸಲ್ಯೆಗೆ ಶ್ರೀರಾಮಚಂದ್ರನೂ, ಸುಮಿತ್ರೆಗೆ ಲಕ್ಷ್ಮಣ ಶತ್ರುಘ್ನರೆಂಬ ಯಮಳರೂ, ಕೈಕೇಯಿಗೆ ಭರತನೆಂಬವನೂ ಜನಿಸಿದರು. ದೇವಾಂಶ ಸಂಭೂತರಾದ ನಾಲ್ವರು ಕುಮಾರರ ಆಕಾರವೂ ಗುಣಗಳೂ ದೇವಸಮಾನ

ವಲ್ಲದೆ ಬೇರೆ ಆದಾವೆ! ಬಾಲಕರು ನಾಲ್ವರಾದರೂ, ಮೂವರು ತಾಯಂದಿರ ಮಕ್ಕಳಾದರೂ, ನಾಲ್ಕು ದೇಹ ಒಂದೆ ಮನಸು ಎಂಬಂತೆ ಬೆಳೆಯುತ್ತ ಹೋದರು. ಅವರಲ್ಲಿ ರಾಮ–ಲಕ್ಷ್ಮಣರೂ, ಭರತ–ಶತ್ರುಘ್ನರೂ ಅನ್ಯೋನ್ಯ ವಾಗಿ ಎಡೆಬಿಡದೆ ಒಟ್ಟಿಗಿರುತ್ತಿದ್ದರು. 'ಲಕ್ಷ್ಮಣನು ರಾಮನ ನೆರಳು, ಶತ್ರುಘ್ನನು ಭರತನ ಛಾಯೆ' ಎನ್ನುವಂತಿದ್ದರೂ, 'ನಾಲ್ಕು ದೇಹದ ಮನಸೂ ಒಂದು' ಎಂಬುದನ್ನು ಮರೆಯುವಂತಿರಲಿಲ್ಲ.

ದಶರಥನಿಗೆ ಇದ್ದ ಕೊರತೆ ಅದೊಂದು—ಮಕ್ಕಳು ಇಲ್ಲದುದು. ಆ ಕೊರತೆ ನೀಗಿ, ಅಂತಹ ಮಕ್ಕಳು ಆಗಿ, ಹೀಗೇ ಇಷ್ಟೇ ಎಂದು ಹೇಳಲಾರದ ಸುಖದಲ್ಲಿ ಅವನು ಮುಳುಗಿದ್ದನು.

# ವಿಶ್ವಾಮಿತ್ರ ಸಹವಾಸ

ಹೀಗೆ ಬ್ರಹ್ಮಲೋಕಾಧಿಪತ್ಯವೇ ತನಗೆ ಬಂದಂತೆ ಪುತ್ರೋತ್ಪತ್ತಿಯ ಆನಂದದಲ್ಲಿ ಮಗ್ನನಾಗಿದ್ದ ದಶರಥನ ಬಳಿಗೆ ವಿಶ್ವಾಮಿತ್ರ ಮಹರ್ಷಿಯು ಬಂದನು. ವಿಶ್ವಾಮಿತ್ರನು ಮಾಡುತ್ತಿದ್ದ ಯಾಗಗಳನ್ನು ರಾಕ್ಷಸರು ಪದೇ ಪದೇ ಬಂದು ಕೆಡಿಸುತ್ತಿದ್ದರು. ಅವರನ್ನು ನಾಶಮಾಡಲು ತನ್ನ ತಪಶ್ಶಕ್ತಿಯನ್ನು ವ್ಯಯಗೊಳಿಸುವುದಕ್ಕೆ ಅವನಿಗೆ ಇಷ್ಟವಿರಲಿಲ್ಲ. ಆದುದರಿಂದ ಬಾಲ ವೀರನಾದ ರಾಮನನ್ನು ಕರದೊಯ್ದು, ಅವನಿಂದ ಆ ರಾಕ್ಷಸರ ಸಂಹಾರವಾಗಬೇಕೆಂದು ವಿಶ್ವಾಮಿತ್ರನ ಆಶಯ. ರಾಮನಿಗೆ ಆಗ ಹದಿನಾರು ವರ್ಷ ವಯಸ್ಸು. ರಾಮನಿಂದಲ್ಲದೆ ಬೇರೆ ಯಾರಿಂದಲೂ ಆ ರಾಕ್ಷಸರು ಹತವಾಗರೆಂದೂ, ತನ್ನ ಯಾಗವು ನಿರ್ವಿಘ್ನವಾಗಿ ನಡೆಯದೆಂದೂ ವಿಶ್ವಾಮಿತ್ರನಿಗೆ ಗೊತ್ತಿತ್ತು. ಅಲ್ಲದೆ, ದುಷ್ಟ ರಾಕ್ಷಸ ವಿನಾಶಕ್ಕಾಗಿಯೇ ಶ್ರೀಮನ್ನಾರಾಯಣನು ರಾಮಾವತಾರಿಯಾಗಿ ಜನಿಸಿರುವನೆಂಬುದೂ ಆ ತ್ರಿಕಾಲಜ್ಞಾನಿಗೆ ತಿಳಿದಿತ್ತು. ಆದಕ್ಕೆಯೆ ರಾಮನನ್ನು ಕರೆದೊಯ್ಯಲು ಅವನು ಬಂದುದು.

ಆದರೆ ದಶರಥನಿಗೆ ರಾಮನನ್ನು ಕಳುಹಿಸಲು ಧೈರ್ಯವಿಲ್ಲ. ತಾನು ಬಹುಕಾಲ ಕಾಣದೆ ಕಾಯ್ದು ಕಾಯ್ದು ಕಂಡ ಮಗನವನು; ತನ್ನ ಪ್ರೀತಿಯ ಪುತ್ರ. ಮಹಾ ಮಹಾ ವೀರರಿಗೂ ಜಗ್ಗದ ಕ್ರೂರ ರಾಕ್ಷಸರಿಗೆ ಎದುರಾಗಿ ತನ್ನ ಮುದ್ದಿನ ಎಳೆಯ ಕಂದನನ್ನು ಕಳುಹಿಸಲು ಅವನ ಮನಸ್ಸು ಒಪ್ಪಲಿಲ್ಲ. ತನ್ನ ಹೆದರಿಕೆಯನ್ನೆಲ್ಲ ವಿಶ್ವಾಮಿತ್ರನಿಗೆ ಹೇಳಿಕೊಂಡನು. ತಾನೇ ತನ್ನ ಸೈನ್ಯದೊಡನೆ ಬಂದು ಸಹಾಯ ಮಾಡುವೆನೆಂದನು. ಯಾರಿಂದ ಏನು ಕೆಲಸವಾಗಬೇಕೆಂದು ವಿಶ್ವಾಮಿತ್ರನಿಗೆ ತಿಳಿದಂತೆ, ಪುತ್ರಮೋಹದಲ್ಲಿ ಮುಳುಗಿದ್ದ ಮಹಾರಾಜನಿಗೆಲ್ಲಿ ಗೊತ್ತು! ರಾಮನನ್ನು ಕಳುಹಿಸಲು ರಾಜನಿಗೆ ಮನಸ್ಸಿಲ್ಲದುದು ನೋಡಿ, ವಿಶ್ವಾಮಿತ್ರನ ಕೋಪ ಕೆರಳುತ್ತಿತ್ತು. ಆಗ ಅರಸನ ಪುರೋಹಿತನಾದ ವಸಿಷ್ಠನು ರಾಮನ ಮಹಾತ್ಮೆಯನ್ನು ವಿಶದವಾಗಿ ವಿವರಿಸಿ ವಿಶ್ವಾಮಿತ್ರನ ರಕ್ಷಣೆಯಲ್ಲಿರುವ ವರೆಗೆ ರಾಮನಿಗೆ ಏನೂ ಭಯವಿಲ್ಲವೆಂದನು. ಅದರಿಂದ ಅರಸನ ಭಯವೂ ವಿಶ್ವಾಮಿತ್ರನ ಕೋಪವೂ ಆರಿತು. ಕಡೆಗೆ ಬಹು ಹೇಳಿದ ಮೇಲೆ ದಶರಥನು ರಾಮನನ್ನು ಕಳುಹಿಸಲು ಒಪ್ಪಿದನು. ವಿಶ್ವಾ

ಮಿತ್ರನು ಸಂತುಷ್ಟನಾಗಿ ದಶರಥನನ್ನು ಹರಸಿ ಹೊರಟನು. ರಾಮನೂ ಅವನನ್ನು ಅಗಲದ ಲಕ್ಷ್ಮಣನೂ ವಿಶ್ವಾಮಿತ್ರನನ್ನು ಹಿಂಬಾಲಿಸಿದರು.

ಹೀಗೆ ಹೊರಟು ಮೂವರೂ ಸರಯೂ ನದಿಯ ದಕ್ಷಿಣ ತೀರಕ್ಕೆ ಬಂದರು ಅಲ್ಲಿ ವಿಶ್ವಾಮಿತ್ರನು ರಾಮನಿಗೆ ಬಲೆ, ಅತಿಬಲೆ ಎಂಬ ಎರಡು ಮಂತ್ರಗಳನ್ನು ಉಪದೇಶಿಸಿದನು. ಹಸಿವು ಬಾಯಾರಿಕೆಗಳನ್ನು ಆಗಗೊಡಿಸದೆ, ಶಕ್ತಿ ಕಾಂತಿ ಸೌಂದರ್ಯಗಳನ್ನು ಹೆಚ್ಚಿಸತಕ್ಕಂತಹ ಮಂತ್ರಗಳವು. ರಾಮನು ಅವನ್ನು ಭಕ್ತಿಪೂರ್ವಕವಾಗಿ ಪ್ರತಿಗ್ರಹಿಸಿದನು.

ಆ ರಾತ್ರಿ ಮೂವರೂ ಅಲ್ಲಿಯೇ ನದೀತೀರದಲ್ಲಿ ಪರ್ಣಶಯ್ಯೆಯಲ್ಲಿ ಮಲಗಿದ್ದರು. ಬೆಳಗಾಗಲು ಎದ್ದು ಪ್ರಾತಃಕರ್ಮಗಳನ್ನು ನೆರವೇರಿಸಿ ಮುಂದೆ ಹೊರಟರು ದಾರಿಯಲ್ಲಿ ಸರಯೂ ಗಂಗಾಸಂಗಮವನ್ನು ಕಂಡರು. ಮಧ್ಯೆ ಮಧ್ಯೆ ಸಿಕ್ಕಿದ ತಪೋವನ ಪುಣ್ಯಾಶ್ರಮಗಳ ಇತಿಹಾಸವನ್ನೆಲ್ಲ ವಿಶ್ವಾಮಿತ್ರನು ಕುಮಾರರಿಗೆ ತಿಳಿಯ ಹೇಳಿದನು. ಹೀಗೆ ದಾರಿಯು ಸುಗಮವಾಗಿ ಸಾಗುತ್ತ ಸಂಜೆಯಾಯಿತು. ಸಾಯಂ ಕರ್ಮಗಳನ್ನು ಮುಗಿಸಿ ಅಲ್ಲಿಯ ಕಾಮಾಶ್ರಮದಲ್ಲಿ ಆ ರಾತ್ರಿ ಕಳೆದು, ಮರುದಿನ ಬೆಳಗ್ಗೆ ಗಂಗಾನದಿಯನ್ನು ದೋಣಿಯಲ್ಲಿ ದಾಟಿ, ಗಂಗೆಯ ದಕ್ಷಿಣ ತೀರದಿಂದಾಚೆ ಹೋದರು. ದಾರಿಯಲ್ಲಿ ಕಂಡ ನದಿ ಅರಣ್ಯಗಳ ಪೂರ್ವ ವೃತ್ತಾಂತವನ್ನು ವಿಶ್ವಾಮಿತ್ರನ ಮುಖದಿಂದ ಕೇಳುತ್ತ, ರಾಮಲಕ್ಷ್ಮಣರಿಗೆ ದಾರಿ ಮುಗಿದುದೇ ತಿಳಿಯಲಿಲ್ಲ.

ಹೀಗೆ ಸಾಗುತ್ತ ಸಾಗುತ್ತ, ಮೂವರೂ ತಾಟಕಾ ವನವನ್ನು ಪ್ರವೇಶಿಸಿದರು. ತಾಟಕೆಯೆಂಬ ರಾಕ್ಷಸಿಯು ಆ ವನದಲ್ಲಿ ಯಾರನ್ನೂ ಇರಗೊಡಿಸದೆ ಧ್ವಂಸ ಮಾಡುತ್ತಿದ್ದಳು. ರಾಮನ ಹೊರತು ಮತ್ತೆ ಯಾರಿಂದಲೂ ಅವಳಿಗೆ ಸಾವಾಗಲಾರದೆಂದು ವಿಶ್ವಾಮಿತ್ರನಿಗೆ ಗೊತ್ತಿತ್ತು. ಗುರುವಿನ ಆಜ್ಞೆಯಂತೆ ತಾಟಕೆಯನ್ನು ವಧಿಸಲು ರಾಮನು ಮನಸ್ಸು ಮಾಡಿದನು. ಆದರೂ ಹೆಂಗಸನ್ನು ಕೊಲ್ಲಲು ಅವನು ಹಿಂದೆಗೆದನು. ಮೊದಲು ಅವಳನ್ನು ಹೆದರಿಸಿ ಓಡಿಸಬೇಕೆಂದು ತನ್ನ ಧನುಸ್ಸನ್ನು ಟಂಕಾರ ಮಾಡಿದನು. ಆ ಧ್ವನಿಗೆ ಭೂಮ್ಯಾಕಾಶಗಳು ಬೆದರಿದರೂ ತಾಟಕೆಯು ಹೆದರಲಿಲ್ಲ. ರೋಷದಿಂದ ರಾಮ-ಲಕ್ಷ್ಮಣರ ಮೇಲೆ ಹಾಯ್ದು ಬಂದಳು. ವಿಶ್ವಾಮಿತ್ರನು ರಾಮ-ಲಕ್ಷ್ಮಣರಿಗೆ ಜಯವಾಗಲೆಂದು ಆಶೀರ್ವದಿಸಿದನು. ಆದರೂ ಕುಮಾರರಿಗೆ

ಅವಳನ್ನು ಕೊಲ್ಲಲು ಮನಸ್ಸು ಬರಲಿಲ್ಲ. ಮಾಯಾ ರೂಪಗಳನ್ನು ತಾಳಿ ತಾಟಕಿಯು ಕರೆಸಿದ ಕಲ್ಲು ಬೆಂಕಿಯ ಮಳೆಗಳನ್ನು ತಮ್ಮ ಬಾಣಗಳಿಂದ ಅಡ್ಡಗಟ್ಟಿ, ಅವಳ ಕಿವಿ, ಮೂಗು, ಕೈ ಕಾಲುಗಳನ್ನು ಕತ್ತರಿಸಿದರು. ಆದರೂ ಮಾಯಾ ವಿದ್ಯೆಯಲ್ಲಿ ಮಿಗಿರಿದ ತಾಟಕಿಯ ಶಕ್ತಿ ಕುಂದಲಿಲ್ಲ. ಆ ವೇಳೆಗೆ ಸಂಜೆಯಾಗುತ್ತ ಬಂತು. ಸಂಜೆ ಮಿಗಿರಿದಂತೆಲ್ಲ ರಾಕ್ಷಸರ ಶಕ್ತಿ ವರ್ಧಿಸುವು ದೆಂದು ವಿಶ್ವಾಮಿತ್ರನು ರಾಮನಿಗೆ ಎಚ್ಚರಿಸಿ, ಸಂಜೆ ಬಲಿಯುವ ಮೊದಲೇ ಅವಳನ್ನು ಕೊಲ್ಲಬೇಕೆಂದು ಹಿತವಾದ ಹೇಳಿದನು. ಸ್ತ್ರೀಹತ್ಯೆಗೆ ಅಂಜಿ ತಾಟಕೆಯ ವಧೆಗೆ ತಡೆಯುತ್ತಿದ್ದ ರಾಮನಿಗೆ, ಇಂತಹ ಪ್ರಸಂಗದಲ್ಲಿ ಸ್ತ್ರೀ ವಧೆಯು ದೋಷರಹಿತವೆಂದು ಧರ್ಮಸೂಕ್ಷ್ಮವನ್ನು ಉಪದೇಶಿಸಿದನು. ವಿಶ್ವಾಮಿತ್ರನ ಉಪದೇಶವು ರಾಮನ ಮನಸ್ಸಿಗೆ ಹಿಡಿಯಿತು. ನಿರಾತಂಕ ವಾದ ಮನಸ್ಸಿನಿಂದ ಬಿಲ್ಲಿಗೆ ಬಾಣ ಬಿಗಿದೆಳೆದು, ರಾಮನು ತಾಟಕೆಯ ಮೇಲೆ ಪ್ರಯೋಗಿಸಿದನು. ವಜ್ರ ತಗುಲಿದ ಹುಲುಪರ್ವತದಂತೆ ತಾಟಕೆಯು ಮಡಿದುರುಳಿದಳು. ತಾಟಕೆಯ ಸಾವನ್ನು ಕಂಡು ಲೋಕವು ಹಾಯಾಗಿ ಉಸಿರಾಡಿತು. ಇಂದ್ರಾದಿ ದೇವತೆಗಳೆಲ್ಲರೂ ರಾಮನನ್ನು ಕೊಂಡಾಡಿದರು.

ತಾಟಕಾಸಂಹಾರವಾದ ವನದಲ್ಲಿಯೇ ಆ ಮೂವರೂ ರಾತ್ರಿಯನ್ನು ಕಳೆದರು. ಆಗ ವಿಶ್ವಾಮಿತ್ರನು ದೇವತೆಗಳ ಪ್ರಾರ್ಥನೆಯಂತೆ ಶ್ರೀ ರಾಮನಿಗೆ ಉತ್ಕೃಷ್ಟವಾದ ಸಮಸ್ತಾಸ್ತ್ರಗಳನ್ನೂ ಉಪದೇಶಿಸಬೇಕೆಂದು ಪೂರ್ವಾಭಿಮುಖ ನಾಗಿ ಜಪ ಮಾಡುತ್ತ ಕುಳಿತನು. ಉಪದೇಶ ಕಾಲದಲ್ಲಿ ಆ ಎಲ್ಲ ಅಸ್ತ್ರಗಳೂ ಸಾಕಾರವಾಗಿ ಬಂದು ರಾಮನಿಗೆ ನಮಸ್ಕರಿಸಿ 'ನಾವೆಲ್ಲ ನಿನ್ನ ಸೇವಕರು' ಎಂದುವು. ರಾಮನೂ ಅವುಗಳ ಸೇವೆಯನ್ನು ಒಪ್ಪಿ ಸ್ವೀಕರಿಸಿದನು. ಸ್ವೀಕರಿಸಿ ವಿಶ್ವಾಮಿತ್ರನಿಗೆರಗಿ ಆ ಅಸ್ತ್ರಗಳ ಉಪಸಂಹಾರ ಮಂತ್ರವನ್ನೂ ಉಪದೇಶಿಸ ಬೇಕೆಂದು ವಿನಯದಿಂದ ಪ್ರಾರ್ಥಿಸಿದನು. ವಿಶ್ವಾಮಿತ್ರನು ಕೂಡ ಸಂತೋಷ ದಿಂದ ಉಪದೇಶಿಸಿದನು. ಹೀಗೆ ಸಕಲಾಸ್ತ್ರಗಳ ಪ್ರಯೋಗೋಪಸಂಹಾರ ಗಳನ್ನು ರಾಮನಿಗೆ ಉಪದೇಶಿಸಿ, ವಿಶ್ವಾಮಿತ್ರನು, ಆ ಇಬ್ಬರು ಸೋದರರನ್ನು ಕರೆದುಕೊಂಡು ಮುಂದೆ ಹೋದನು.

ಮುಂದೆ ಸಿಕ್ಕಿದ ವನವು ಬಹು ಸೌಮ್ಯವಾಗಿತ್ತು. ಅಲ್ಲಿಯ ಆಶ್ರಮಕ್ಕೆ ಸಿದ್ಧಾಶ್ರಮವೆಂದು ಹೆಸರು. ಅದು ಮೃಗಪಕ್ಷಿಗಳಿಂದಲೂ ನದಿ ವನ

ಗಳಿಂದಲೂ ಬಹು ರಮ್ಯವಾಗಿತ್ತು. ಘೋರವಾದ ತಾಟಕಾವನದಿಂದ ಬಂದು ಇಂತಹ ಸೌಮ್ಯ ವನವನ್ನು ಕಂಡು ಕುಮಾರರಿಗೆ ಕುತೂಹಲವಾಯಿತು. ಆ ಕುತೂಹಲವನ್ನು ಕಂಡು, ವಿಶ್ವಾಮಿತ್ರನು, ಆ ಆಶ್ರಮದ ಪೂರ್ವಕತೆಯನ್ನು ತಿಳಿಸಿದನು. ಬಲಿಚಕ್ರವರ್ತಿಯನ್ನು ಪಾತಾಳಕ್ಕೆ ಮೆಟ್ಟಲು ವಿಷ್ಣುವು ವಾಮನನಾಗಿ ಬಂದಿದ್ದನಷ್ಟೆ. ಆ ವಾಮನಮೂರ್ತಿಯು ತಪಸ್ಸು ಮಾಡಿ ಸಿದ್ಧಿಗಂಡ ಆಶ್ರಮವೇ ಅದು. ವಾಮನನ ತಂದೆಯಾದ ಕಶ್ಯಪನು ತಪಸ್ಸು ಮಾಡಿದುದೂ ಅಲ್ಲಿಯೆ. ಈಗ ವಿಶ್ವಾಮಿತ್ರನು ಯಜ್ಞ ಮಾಡುವುದೂ ಅಲ್ಲಿಯೆ.

ಈ ವಿಷಯಗಳನ್ನು ತಿಳಿಸಿ, ವಿಶ್ವಾಮಿತ್ರನು "ರಾಮಾ! ನನ್ನ ಯಜ್ಞಕ್ಕೆ ವಿಘ್ನಮಾಡುವ ರಾಕ್ಷಸರು ಇಲ್ಲಿಗೆ ಬರುವರು. ನೀನು ಅವರನ್ನು ಸಂಹರಿಸಬೇಕಾದುದು ಇಲ್ಲಿಯೆ" ಎಂದನು. ಕುಮಾರರು ಅವನ ಆಜ್ಞೆಯನ್ನು ಶಿರಸಾವಹಿಸುವೆವೆಂದರು

ಕುಮಾರರ ಆಗಮನದಿಂದ ಸಿದ್ಧಾಶ್ರಮದ ತಾಪಸರಿಗೆ ಆದ ಆನಂದ ವಷ್ಟಿಷ್ಟಲ್ಲ. ವಿಶ್ವಾಮಿತ್ರನಿಗೆ ಯಥೋಚಿತ ಪೂಜೆಯೂ, ರಾಜಕುಮಾರರಿಗೆ ಅತಿಥಿಸತ್ಕಾರಗಳೂ ನಡೆದ ಮೇಲೆ ಎಲ್ಲರೂ ಸ್ವಲ್ಪ ವಿಶ್ರಮಿಸಿ ಮಾರ್ಗಾಯಾಸವನ್ನು ಕಳೆದರು.

ವಿಶ್ವಾಮಿತ್ರನು ಯಜ್ಞದೀಕ್ಷೆ ವಹಿಸಿದನು. ಕುಮಾರರು ಧನುರ್ಧಾರಿಗಳಾಗಿ ಕಾವಲು ನಿಂತರು. ವಿಶ್ವಾಮಿತ್ರನದು ಆರು ದಿನ ನಡೆಯುವ ಯಜ್ಞ. ಕುಮಾರರು ರಾತ್ರಿ ಹಗಲೆನ್ನದೆ ಎಚ್ಚರಿಕೆಯಿಂದ ಕಾವಲಿದ್ದರು. ಮೊದಲಿನ ಐದು ದಿವಸ ಏನೊಂದು ಅಡ್ಡಿ ಆತಂಕವಿಲ್ಲದೆ ಯಜ್ಞ ಸಾಗಿತು. ಕಡೆಯ ದಿನವಾದ ಆರನೆಯ ದಿನ ಬಾಲಕರ ಯುದ್ಧೋತ್ಸಾಹವೂ ಜಾಗರೂಕತೆಯೂ ಹೆಚ್ಚುತ್ತಿತ್ತು. ಅತ್ತ ಯಜ್ಞ ಸರಾಗವಾಗಿ ನಡೆಯುತ್ತಿತ್ತು.

ಇದ್ದಕ್ಕಿದ್ದಂತೆ ಆಕಾಶದಲ್ಲಿ ಭಯಂಕರವಾದ ಸದ್ದು ಕೇಳಿಸಿತು. ರಾಮಲಕ್ಷ್ಮಣರು ಮೇಲೆ ನೋಡಿದರು. ಮಾರೀಚ ಸುಬಾಹುಗಳೆಂಬ ಘೋರ ರಾಕ್ಷಸರು ತಮ್ಮ ನಿಶಾಚರ ಪಡೆಯೊಡನೆ ಗಗನದಲ್ಲಿ ಧಾವಿಸಿ ಬರುತ್ತಿದ್ದರು. ಯಜ್ಞವೇದಿಕೆಗೆ ರಕ್ತ ಸುರಿಯಲು ಓಡಿಬರುತ್ತಿದ್ದರು ಯಜ್ಞವನ್ನು ಅವರು ಕೆಡಿಸುವ ಮೊದಲೇ ಅವರನ್ನು ಧ್ವಂಸಮಾಡಬೇಕೆಂದು, ರಾಮನು ಮಾನ

ವಾಸ್ತ್ರವನ್ನು ತೆಗೆದುಬಿಟ್ಟನು. ಮಾರೀಚನು ಆ ಅಸ್ತ್ರಕ್ಕೆ ಸಿಕ್ಕಿ, ಗಾಳಿಗೆ ಸಿಕ್ಕಿದ ತರಗೆಲೆಯಂತೆ ತೂರಿಹೋಗಿ, ನೂರು ಯೋಜನದ ಮಧ್ಯದಲ್ಲಿ ಬಿದ್ದನು. ಸುಬಾಹುವು ರಾಮನ ಆಗ್ನೇಯಾಸ್ತ್ರಕ್ಕೆ ಬಲಿಯಾದನು. ಉಳಿದ ರಾಕ್ಷಸರು ವಾಯವ್ಯಾಸ್ತ್ರದಿಂದ ಹತರಾದರು. ರಾಕ್ಷಸರೆಲ್ಲರೂ ಹೇಳ ಹೆಸರಿಲ್ಲದಂತೆ ನಾಶವಾದರು.

ಇತ್ತ ರಾಕ್ಷಸ ಹನನವಾಗುತ್ತಿರಲು ಅತ್ತ ಯಜ್ಞವು ಸಾಂಗವಾಗಿ ನೆರವೇರಿತು. ಯಜ್ಞವನ್ನು ಮುಗಿಸಿ ಎದ್ದ ವಿಶ್ವಾಮಿತ್ರನು, ರಾಕ್ಷಸರು ಸತ್ತು ನಾಲ್ಕೂ ಕಡೆ ಶಾಂತಿ ನೆಲೆಸಿರುವುದನ್ನು ಕಂಡು ಸಂತುಷ್ಟನಾದನು ತಾನು ಕೃತಾರ್ಥನಾದೆನೆಂದು ತೃಪ್ತನಾದನು. ಗುರುವಚನವನ್ನು ಪಾಲಿಸಿ ಕೃತಕೃತ್ಯರಾದ ಕುಮಾರರಿಗೆ ಲೇಸಾಗಲೆಂದು ಹರಸಿದನು.

# ಸೀತಾ ಕಲ್ಯಾಣ

ಒಂದೇ ಕಾಲದಲ್ಲಿ ಮಿಥಿಲಾನಗರದಲ್ಲಿ ಜನಕನೆಂಬ ಅರಸನಿದ್ದನು. ಆತನು ಅನೇಕ ಯಜ್ಞಯಾಗಾದಿಗಳನ್ನು ಮಾಡಿ ಮಹಾತ್ಮನೆನಿಸಿಕೊಂಡಿದ್ದನು. ಅವನಿಗೆ ಸೀತೆಯೆಂಬ ಮಗಳಿದ್ದಳು. ಮಗಳೆಂದರೆ ಸಾಕುಮಗಳು; ಸ್ವಂತ ಮಗಳಲ್ಲ. ಜನಕನು ಸಂತಾನ ಪಡೆಯಬೇಕೆಂದು ಒಮ್ಮೆ ಯಾಗ ಮಾಡಲು ಭೂಮಿಯುಳುತ್ತಿದ್ದಾಗ. ನೇಗಿಲ ಗೆರೆಯಲ್ಲಿ ಸಿಕ್ಕಿದ ಮುದ್ದು ಮಗಳೇ ಸೀತೆ. ಜನಕನು ಅವಳನ್ನು ಸ್ವಂತ ಮಗಳಿಗಿಂತ ಹೆಚ್ಚಾಗಿ ಕಾಣುತ್ತ ಲಾಲಿಸುತ್ತಿದ್ದನು. ಆಕೆಗೆ ಮದುವೆಗೆ ತಕ್ಕ ವಯಸ್ಸಾದಾಗ, ಅವಳನ್ನು ಕಂಡವರಿಗೆ ಕೊಟ್ಟು ಮದುವೆ ಮಾಡಲು ಅವನ ಮನಸ್ಸು ಒಪ್ಪಲಿಲ್ಲ. ಅವಳಿಗೆ ಅನುರೂಪನಾದ ವರನನ್ನು ಪರೀಕ್ಷಿಸಿ ಪಡೆಯಬೇಕೆಂದುಕೊಂಡನು.

ಹಿಂದೆ ದಕ್ಷನ ಯಜ್ಞದಲ್ಲಿ ಅವಮಾನಿತನಾದ ರುದ್ರನು, ತನಗೆ ಹವಿರ್ಭಾಗವನ್ನು ಕೊಡಿಸದಿದ್ದ ದೇವತೆಗಳನ್ನೆಲ್ಲ ತೊಡೆದುಬಿಡುವೆನೆಂದು ತನ್ನ ಶಿವಧನುಸ್ಸನ್ನು ಮೇಲೆತ್ತಿದನು. ದೇವತೆಗಳೆಲ್ಲರೂ ಭಯಪಟ್ಟು ರುದ್ರನ ಮನ್ನಣೆ ಬೇಡಿದರು ಪ್ರಸನ್ನನಾದ ಈಶ್ವರನು ತನ್ನ ಧನುಸ್ಸನ್ನು ದೇವತೆಗಳಿಗೆ ಅನುಗ್ರಹಿಸಿದನು. ಕಾಲಾನಂತರ ದೇವತೆಗಳು ಅದೇ ಧನುಸ್ಸನ್ನು ಜನಕನ ವಂಶದಲ್ಲಿ ಆರನೆಯವನಾದ ದೇವರಾತನಿಗೆ ಕೊಟ್ಟರು. ಅಂದಿನಿಂದ ಅದು ಅವರ ವಂಶದಲ್ಲಿತ್ತು. ಅದನ್ನು ಸಾಮಾನ್ಯರಾರೂ ಎತ್ತಲಾಗುತ್ತಿರಲಿಲ್ಲ. ಆ ಬಿಲ್ಲನ್ನು ಇಟ್ಟಿದ್ದ ಉಕ್ಕಿನ ಪೆಟ್ಟಿಗೆಗೆ ಎಂಟು ಚಕ್ರಗಳಿತ್ತು. ಅದನ್ನು ಎಳೆದು ತರಲು ಕಟ್ಟುವ್ನೈಯಿನ ಐದು ಸಾವಿರ ಜನ ಬೇಕಾಗುತ್ತಿತ್ತು! ಅಂತಹ ಶಿವಧನುಸ್ಸನ್ನು ಎತ್ತಿ ಬಗ್ಗಿಸಿ ಹಗ್ಗವೇರಿಸಿದವರಿಗೆ ಸೀತೆಯನ್ನು ಮದುವೆ ಮಾಡುತ್ತೇನೆಂದು ಜನಕನು ಪ್ರಸಿದ್ಧಪಡಿಸಿದ್ದನು. ಸೀತೆಯನ್ನು ಪಡೆಯಬೇಕೆಂಬಾಸೆಯಿಂದ ಮಹಾವೀರರು ಅನೇಕರು ಬಂದರು. ಆದರೆ ಯಾರೂ ಆ ಬಿಲ್ಲನ್ನೆತ್ತಿ ನಾಣೇರಿಸಲಾರದೆ ಹೋದರು. ಹೀಗಿರುವಾಗ ಜನಕನು ಮತ್ತೊಂದು ಯಜ್ಞಮಾಡಲು ಸಿದ್ಧನಾಗುತ್ತಿದ್ದನು.

ಜನಕನ ಯಜ್ಞಗಳೆಂದರೆ ಜಗದ್ವಿಖ್ಯಾತವಾದುವು, ಅಭೂತಪೂರ್ವವಾದುವು. ಅಂತಹ ಜನಕನ ಹೊಸ ಯಜ್ಞದ ಸುದ್ದಿ ವಿಶ್ವಾಮಿತ್ರನ ಸಿದ್ಧಾ

ಶ್ರಮಕ್ಕೂ ಮುಟ್ಟಿತು. ಆ ವೇಳೆಗೆ ವಿಶ್ವಾಮಿತ್ರನ ಯಜ್ಞವೂ ಮುಗಿದಿತ್ತು. ಋಷಿಗಳೆಲ್ಲರೂ ಜನಕನ ಯಜ್ಞದಲ್ಲಿ ಭಾಗಿಗಳಾಗಲು ಉತ್ಸುಕರಾಗಿದ್ದರು. ರಾಮನು ಶಿವಧನುಸ್ಸನ್ನೆತ್ತಿ ಸೀತೆಯನ್ನು ವರಿಸಲೆಂದು ವಿಶ್ವಾಮಿತ್ರನೂ ಪ್ರಯಾಣಸನ್ನದ್ಧನಾದನು. ಗುರುವಾಜ್ಞೆಯಂತೆ ಬಾಲಕರಿಬ್ಬರೂ ಅವನ ಹಿಂದೆ ಹೊರಟರು. ಸಕಾಲದಲ್ಲಿ ಮಿಥಿಲೆಗೆ ಹೋಗಿ ಸೇರಬೇಕೆಂದು ಎಲ್ಲರೂ ಉತ್ತರಾಭಿಮುಖವಾಗಿ ನಡೆದರು.

ವಿಶ್ವಾಮಿತ್ರನು ಎಂದಿನಂತೆ ದಾರಿಯ ಕ್ಷೇತ್ರಗಳ ಪೂರ್ವಕತೆಯನ್ನು ಕುಮಾರರಿಗೆ ತಿಳಿಸುತ್ತಿದ್ದನು. ಹಗಲೆಲ್ಲ ಹಾದಿ ನಡೆದು, ರಾತ್ರಿ ತಂಗಿದರೆ, ಹಳೆಯ ಕತೆ ಹೇಳಿ, ಬಾಲಕರ ಕಣ್ಣರಳಿಸುತ್ತಿದ್ದನು. ಸಗರನ ಯಜ್ಞಾಶ್ವವನ್ನು ಇಂದ್ರನು ಕದ್ದುದು, ಅವನ ಸಾವಿರ ಮಕ್ಕಳು ಕಪಿಲಋಷಿಯಿಂದ ಭಸ್ಮವಾದುದು, ಆ ಭಸ್ಮವನ್ನು ಸಾಗರಕ್ಕೆ ಸಾಗಿಸಲು ಭಗೀರಥನು ಗಂಗೆಯನ್ನು ಬಾರೆಂದು ಬೇಡಿದುದು, ಗಂಗೆಯ ರಭಸದಿಂದ ಭೂಮಿ ನಾಶವಾದೀತೆಂದು ಈಶ್ವರನು ಅವಳನ್ನು ತನ್ನ ಜಟೆಯಲ್ಲಿ ತಾಳಿದುದು, ಭಗೀರಥನು ಪುನಃ ಘೋರ ತಪಸ್ಸು ಮಾಡಿ ಗಂಗೆಯನ್ನು ಬಿಡಿಸಿತಂದುದು ಇವೇ ಮೊದಲಾದ ಅನೇಕಾನೇಕ ಕತೆಗಳನ್ನು ರಾಮಲಕ್ಷ್ಮಣರು ಕೇಳಿದರು. ಅವರು ಹಗಲೆಲ್ಲ ಹಾದಿ ನಡೆಯುವರು; ರಾತ್ರಿ ತಂಗಿ, ವಿಶ್ರಮಿಸಿ, ಕತೆ ಕೇಳುವರು.

ಹೀಗೆಯೇ ಹೋಗುತ್ತಿರುವಾಗ ದಾರಿಯಲ್ಲಿ ಹಾಳುಬಿದ್ದಿದ್ದ ಗೌತಮನ ಆಶ್ರಮ ಸಿಕ್ಕಿತು. ಅಲ್ಲಿ ಹಿಂದೆ ಗೌತಮನೆಂಬ ಋಷಿಯೂ ಅವನ ಹೆಂಡತಿ ಅಹಲ್ಯೆಯೂ ವಾಸವಾಗಿದ್ದರು. ಒಮ್ಮೆ ಇಂದ್ರನು ಅಹಲ್ಯೆಯನ್ನು ಮೋಹಿಸಿ ಬಂದು, ಮೋಸದಿಂದ ಅವಳನ್ನು ಕೂಡಿದನು. ಗೌತಮನು ಅದನ್ನು ತಿಳಿದು ಇಬ್ಬರಿಗೂ ಶಾಪಕೊಟ್ಟನು. ಅಹಲ್ಯೆಯು, ಗೌತಮನ ಶಾಪದಂತೆ, ಅನೇಕ ವರ್ಷಗಳ ವರೆಗೆ ಕಲ್ಲಾಗಿ ಬಿದ್ದಿರಬೇಕಾಯಿತು. ಆದರೆ ಶ್ರೀರಾಮನ ಕಾಲು ತಗುಲಿದಾಗ ಅವಳು ಮೊದಲಿನ ರೂಪ ಪಡೆಯುಬಹುದೆಂದು ಅನುಗ್ರಹವಾಗಿತ್ತು. ಹೀಗೆ ಶಾಪಾನುಗ್ರಹ ಕೊಟ್ಟು ಗೌತಮನು ಹಿಮವತ್ಪರ್ವತಕ್ಕೆ ತಪಸ್ಸಿಗೆ ಹೊರಟು ಹೋದನು. ಅಂದಿನಿಂದ ಆ ಹಾಳುಬಿದ್ದ ಆಶ್ರಮದಲ್ಲಿ ಅಹಲ್ಯೆಯು ಕಲ್ಲಾಗಿ ಬಿದ್ದಿದ್ದಳು.

ವಿಶ್ವಾಮಿತ್ರನು ಅದೆಲ್ಲವನ್ನೂ ರಾಮನಿಗೆ ತಿಳಿಸಿ ಅವನನ್ನು ಗೌತಮನ

ಆಶ್ರಮಕ್ಕೆ ಕರೆತಂದನು. ರಾಮನ ಪಾದಸ್ಪರ್ಶದಿಂದ ಅಹಲ್ಯೆಗೆ ಶಾಪ ವಿಮೋಚನೆಯಾಯಿತು. ಕಲ್ಲಾಗಿದ್ದವಳು ಪುನಃ ಸ್ತ್ರೀಯಾದಳು. ಆ ಬಿಡುಗಡೆಯನ್ನು ಯೋಗದೃಷ್ಟಿಯಿಂದ ತಿಳಿದು, ಗೌತಮನು ಒಡನೆಯೇ ಅಲ್ಲಿಗೆ ಬಂದನು. ಅಹಲ್ಯಾ ಗೌತಮರಿಬ್ಬರೂ ಅತಿಥಿಗಳನ್ನು ಸತ್ಕರಿಸಿ ಬೀಳ್ಕೊಟ್ಟರು. ರಾಮ-ಲಕ್ಷ್ಮಣರೂ, ವಿಶ್ವಾಮಿತ್ರನೂ, ಇತರ ಋಷಿಗಳೂ ಅವರ ಸತ್ಕಾರಕ್ಕೆ ಸಂತೋಷಿಸಿ ಮಿಥಿಲೆಗಾಗಿ ಮುಂದೆ ಹೊರಟರು.

ವಿಶ್ವಾಮಿತ್ರನು ಮಿಥಿಲೆಗೆ ಬಂದುದು ಕೇಳಿ, ಜನಕನು ಮಂತ್ರಿ ಪುರೋಹಿತರೊಡನೆ ಹೋಗಿ, ಅವನನ್ನು ಎದುರುಗೊಂಡನು. ಪರಸ್ಪರ ಕುಶಲ ಪ್ರಶ್ನೆಗಳಾದ ಮೇಲೆ, ವಿಶ್ವಾಮಿತ್ರನು ಜನಕನಿಗೆ ರಾಮಲಕ್ಷ್ಮಣರ ಪರಿಚಯವನ್ನು ಮಾಡಿ, ತಾನು ಅವರನ್ನು ಕರೆತಂದ ಉದ್ದೇಶವನ್ನೂ ತಿಳಿಸಿದನು. ಇಕ್ಷ್ವಾಕುಮಹಾವಂಶದ ದಶರಥನ ಮಗನು ತನ್ನ ಮಗಳ ಪಾಣಿಗ್ರಹಣಕ್ಕಾಗಿ ಬಂದುದು ತಿಳಿದು ಜನಕನು ಉಬ್ಬಿದನು. ಎಲ್ಲರ ಪರೀಕ್ಷೆಗೂ ಬಂದಂತೆ ಶಿವಧನುಸ್ಸು ರಾಮನ ಪರೀಕ್ಷೆಗೂ ಬಂದಿತು. ರಾಮನು ಆ ಧನುಸ್ಸನ್ನು ನೋಡಿದನು. ಗುರುವಾದ ವಿಶ್ವಾಮಿತ್ರನಿಗೆ ನಮಸ್ಕರಿಸಿ ಬಿಲ್ಲಿನ ನಡುವಿಗೆ ಕೈಯಿಕ್ಕಿ ಲೀಲಾಜಾಲವಾಗಿ ಅದನ್ನು ಮೇಲೆತ್ತಿದನು. ಹಗ್ಗವನ್ನು ಎತ್ತಿ ಕಟ್ಟಲು ಅನಾಯಾಸವಾಗಿ ಬಿಲ್ಲು ಬಗ್ಗಿಸಿದನು. ಆತನ ಶಕ್ತಿಗೆ ತಾಳಲಾರದೆ ಬಿಲ್ಲು ಮುರಿಯಿತು. ಆ ಮುರಿದ ಸದ್ದಿಗೆ ಮೂರು ಲೋಕವೂ ನಡುಗಿತು. ಶಿವಧನುರ್ಭಂಗದಿಂದ ರಾಮನು ವಿಜಯಿಯಾದನು.

ರಾಮನ ಅತ್ಯದ್ಭುತ ವೀರ್ಯವನ್ನು ಕಂಡು ಜನಕನಿಗೆ ಆಶ್ಚರ್ಯವಾಯಿತು, ಆನಂದವಾಯಿತು. ಒಡನೆಯೆ ವಿಶ್ವಾಮಿತ್ರನ ಅಪ್ಪಣೆ ಪಡೆದು, ದಶರಥನನ್ನು ಕರೆತರಲು ಅಯೋಧ್ಯೆಗೆ ದೂತರನ್ನಟ್ಟಿದನು. ದೂತರು ರಾಮನು ಬಿಲ್ಲು ಮುರಿದ ಸಂಗತಿಯನ್ನೂ, ಸೀತಾಕಲ್ಯಾಣದ ಪ್ರಸಂಗವನ್ನೂ ದಶರಥನಿಗೆ ನಿವೇದಿಸಿ, ಜನಕನ ವಾರ್ತೆಯನ್ನು ಬಿನ್ನವಿಸಿದರು. ಜನಕನಂತಹ ಸತ್ಕುಲಪ್ರಸೂತನಿಗೂ ತನಗೂ ಬಾಂಧವ್ಯ ಬೆಳೆಯುವುದೆಂದರೆ, ದಶರಥನು ಬೇಡವೆಂದಾನೆ! ಸೀತಾರಾಮರ ಕಲ್ಯಾಣಕ್ಕೆ ದಶರಥನ ಒಪ್ಪಿಗೆಯಾಯಿತು. ಅಯೋಧ್ಯೆಯು ಮಿಥಿಲೆಗೆ ಹೋಯ್ತು.

ಜನಕನು ಕೈಕೊಂಡ ಯಜ್ಞವು ಕೊನೆಗಂಡಿತು. ಸುಮುಹೂರ್ತ

ದಲ್ಲಿ ಸೀತಾರಾಮರ ಪರಿಣಯವಾಯ್ತು. ಅದೇ ಕಾಲದಲ್ಲಿ ಜನಕನು ತನ್ನ ಇನ್ನೊಬ್ಬ ಮಗಳಾದ ಊರ್ಮಿಳೆಯನ್ನು ಲಕ್ಷ್ಮಣನಿಗೆ ಕೊಟ್ಟು ಮದುವೆ ಮಾಡಿದನು. ಜನಕನಿಗೆ ಕುಶಧ್ವಜನೆಂಬ ತಮ್ಮನಿದ್ದನು. ಆತನ ಮಗಳಂದಿರಾದ ಮಾಂಡವಿ ಶ್ರುತಕೀರ್ತಿಯರನ್ನು, ವಸಿಷ್ಠ ವಿಶ್ವಾಮಿತ್ರರ ಮಾತಿನ ಮೇರೆ, ದಶರಥನು ಭರತ ಶತ್ರುಘ್ನರಿಗೆ ತಂದುಕೊಂಡನು. ಈ ನಾಲ್ಕು ಮದುವೆಯೆ ಕಾರಣವಾಗಿ ಇಕ್ಷ್ವಾಕು ವಿದೇಹ ವಂಶಗಳ ಬೆಸುಗೆ ಬಲಿಯಿತು.

ವಿವಾಹ ಮಹೋತ್ಸವವು ಮುಗಿಯಿತು ವಿಶ್ವಾಮಿತ್ರನು ರಾಮಾದಿಗಳನ್ನು ಹರಸಿ, ದಶರಥ ಜನಕರನ್ನು ಬೀಳ್ಕೊಂಡು, ಹಿಮಾಲಯದ ತಪ್ಪಲಿಗೆ ಹೊರಟುಹೋದನು ಅಯೋಧ್ಯೆಗೆ ಹಿಂದಿರುಗಲು ಸಿದ್ಧನಾದ ದಶರಥನನ್ನೂ ಅವನ ಪರಿವಾರವನ್ನೂ ದಾರಿ ಕಳುಹಿಸುವುದಕ್ಕಾಗಿ ಜನಕನೂ ಕೊಂಚ ದೂರ ಅವರನ್ನು ಹಿಂಬಾಲಿಸಿ ಮಿಥಿಲೆಗೆ ಹಿಂದಿರುಗಿದನು. ದಶರಥನೊಡನೆ ನವ ವಧೂವರರೂ ಇನ್ನಿತರ ಪರಿವಾರವೂ ಮುಂದೆ ಪ್ರಯಾಣ ಬೆಳೆಸಿತು.

ಹೀಗೆ ಹೋಗುತ್ತಿರುವಾಗ ದಾರಿಯಲ್ಲಿ ಕೆಲವು ಕೆಟ್ಟ ಶಕುನಗಳಾದವು. ಕೆಲವು ಒಳ್ಳೆಯ ಶಕುನಗಳಾದವು. ಅವುಗಳನ್ನು ಕಂಡು ಕಳವಳಿಸಿದ ದಶರಥನನ್ನು ವಸಿಷ್ಠನು ಸಮಾಧಾನಗೊಳಿಸಿದನು. 'ರಾಜ! ಈ ದುಶ್ಶಕುನಗಳಿಂದ ನಮಗೆ ಮುಂದೆ ವಿಪತ್ತಾಗಬಹುದಾದರೂ, ಈ ಶುಭಸೂಚನೆಗಳಿಂದ ಅದು ಕಳೆದುಹೋಗುವುದು' ಎಂದನು. ಹೀಗೆ ಹೇಳುತ್ತಿರುವಾಗ, ಪ್ರಚಂಡ ಮಾರುತನೆದ್ದಿತು. ದೊಡ್ಡ ದೊಡ್ಡ ಮರಗಳು ಉರುಳಿದುವು. ಅಸಾಧ್ಯವಾದ ಧೂಳು ಎದ್ದು, ಸೂರ್ಯನನ್ನು ಮರೆಮಾಡಿತು. ಕತ್ತಲು ಕವಿದಂತಾಯಿತು. ಥಟಾರನೆ ಪರಶುರಾಮನು ಭಯಂಕರಸ್ವರೂಪನಾಗಿ ಎದುರಿಗೆ ಬಂದು ನಿಂತನು. ಹೆಗಲಲ್ಲಿ ಕೊಡಲಿ, ಕೈಯಲ್ಲಿ ಬಿಲ್ಲುಬಾಣಗಳನ್ನು ಧರಿಸಿ ನಿಂತ ಭಾರ್ಗವನನ್ನು ಕಂಡು ಋಷಿಗಳೆಲ್ಲರೂ ಅರ್ಘ್ಯಪಾದ್ಯಾದಿಗಳಿಂದ ಅವನನ್ನು ಸತ್ಕರಿಸಿದರು.

ಪರಶುರಾಮನು ಜಮದಗ್ನಿಯೆಂಬ ಋಷಿಯ ಮಗನು. ಜಮದಗ್ನಿಯು ಕ್ಷತ್ರಿಯರ ಕೈಲಿ ಹತನಾದಾಗ, ಪರಶುರಾಮನು ಕೆರಳಿ ಕ್ಷತ್ರಿಯ ವಂಶವನ್ನೇ ನಿರ್ಮೂಲ ಮಾಡುವೆನೆಂದು ಪ್ರತಿಜ್ಞೆ ಮಾಡಿದನು. ಅದರಂತೆ ಇಪ್ಪತ್ತೊಂದು ಸಲ ಭೂಪ್ರದಕ್ಷಿಣೆ ಮಾಡಿ, ಕಂಡ ಕ್ಷತ್ರಿಯರನ್ನೆಲ್ಲ ಕೊಂಟನು.

ಕಡೆಗೆ ಪುನಃ ಶಸ್ತ್ರಪರಿಗ್ರಹ ಮಾಡುವುದಿಲ್ಲವೆಂದು ಇಂದ್ರನಿಗೆ ಮಾತುಕೊಟ್ಟು, ತಾನು ಜಯಿಸಿದ ಭೂಮಿಯೆಲ್ಲವನ್ನೂ ಕಾಶ್ಯಪನೆಂಬ ಬ್ರಾಹ್ಮಣನಿಗೆ ದಾನ ವೆರೆದು, ಮಹೇಂದ್ರ ಪರ್ವತದಲ್ಲಿ ತಪಸ್ಸು ಮಾಡಲು ಹೋದನು. ತಪಸ್ಸು ಮಾಡುತ್ತಿದ್ದ ಭಾರ್ಗವನಿಗೆ, ಕ್ಷತ್ರಿಯನಾದ ರಾಮನು ಶಿವಧನುಸ್ಸನ್ನು ಮುರಿದ ಮಾತು ಮುಟ್ಟಿತು. ಪರಶುರಾಮನಿಗೆ ಕ್ಷತ್ರಿಯರ ಮೇಲಿನ ಕ್ರೋಧ ಇನ್ನೂ ಇಳಿದಿರಲಿಲ್ಲ. ಶಿವಧನುಸ್ಸಿಗೆ ಮಿಗಿಲಾದ ವಿಷ್ಣುಧನುಸ್ಸನ್ನು ತಂದು, ಅದರಿಂದ ರಾಮನ ಶಕ್ತಿಯನ್ನು ಅಳೆದು, ಅನಂತರ ಆತನೊಡನೆ ದ್ವಂದ್ವಯುದ್ಧ ಮಾಡಬೇಕೆಂದು ಪರಶುರಾಮನು ಬಂದನು.

ದಶರಥನು, ತನ್ನ ಮಗನನ್ನು ಕೊಲ್ಲಲು ಪರಶುರಾಮನು ಬಂದುದು ಕೇಳಿ, ಪುತ್ರವ್ಯಾಮೋಹಕ್ಕೆ ಸೋತು ಬೆದರಿ ಬೆಂಡಾದನು. ತನ್ನ ಮಕ್ಕಳನ್ನು ಹೇಗಾದರೂ ಕಾಪಾಡಬೇಕೆಂದು ಭಾರ್ಗವನನ್ನು ಬೇಡಿಕೊಂಡನು. ಪರಶು ರಾಮನು ಅವನ ಪ್ರಾರ್ಥನೆಯನ್ನು ಕಿವಿಗೆಯೆ ಹಾಕಿಕೊಳ್ಳದೆ ನೇರಾಗಿ ರಾಮನ ಬಳಿಗೆ ನಡೆದು, ಬಿಲ್ಲುಬಾಣಗಳನ್ನು ನೀಡಿದನು.

"ರಾಮಾ! ಶಿವಧನುಸ್ಸನ್ನು ಮುರಿದುದು ಹೆಚ್ಚಲ್ಲ. ಆ ಶಿವಧನುಸ್ಸನ್ನು ಮೀರಿಸಿದುದಿದು–ವಿಷ್ಣುಧನುಸ್ಸು. ಇದನ್ನು ಎಳೆದು ಕಟ್ಟಿ ಬಾಣ ಹೂಡು. ಅದ ರಲ್ಲಿ ನಿನ್ನ ಶಕ್ತಿ ನೋಡಿ ನಿನ್ನೊಡನೆ ದ್ವಂದ್ವಯುದ್ಧ ಮಾಡುವೆನು" ಎಂದನು.

ರಾಮನು ಆ ಬಿಲ್ಲುಬಾಣಗಳನ್ನು ತೆಗೆದುಕೊಂಡು "ಭಾರ್ಗವ! ನೀನು ಸಾಹಸಿ ಹೌದು. ಆದರೆ ಮಿಕ್ಕವರನ್ನು ಅಸಾಹಸಿಗಳೆಂದೂ ನಿರ್ವೀರ್ಯ ರೆಂದೂ ಹಳಿಯುವುದು, ಹೀಗೆ ಗರ್ವಿತನಾಗಿರುವುದು, ನಿನ್ನಂತಹವನಿಗೆ ತಕ್ಕುದಲ್ಲ" ಎಂದು ಮಾತನಾಡುತ್ತಿದ್ದಂತೆಯೆ ಬಿಲ್ಲು ಬಿಗಿದು ಬಾಣ ಸಂಧಾನ ಮಾಡಿದನು.

"ಭಾರ್ಗವ! ನೀನು ಬ್ರಾಹ್ಮಣನು. ನನಗೆ ಪೂಜ್ಯ ಗುರುವಾದ ವಿಶ್ವಾ ಮಿತ್ರನಿಗೆ ನೀನು ಬಂಧು. ಈ ಸಂಧಾನ ಮಾಡಿರುವ ಬಾಣವನ್ನು ನಿನ್ನ ಮೇಲೆ ಬಿಟ್ಟು ನಿನ್ನ ಪ್ರಾಣಕ್ಕೆ ಅಪಾಯ ತರಲಾರೆ. ಆದರೆ ವಿಷ್ಣುಶಕ್ತಿ ಯುಳ್ಳ ಈ ಬಾಣವು ಸಂಧಾನವಾದ ಮೇಲೆ ವ್ಯರ್ಥವಾಗತಕ್ಕುದಲ್ಲ. ಅದ ಕ್ಕಾಗಿ ನಿನ್ನ ಸಂಚಾರಶಕ್ತಿಯನ್ನಾಗಲಿ, ನೀನು ಸಂಪಾದಿಸಿದ ಪುಣ್ಯವನ್ನಾಗಲಿ ಕೆಡಿಸಬೇಕಾಗುವುದು".

ರಾಮನ ಬಾಣಸಂಧಾನವನ್ನು ಕಂಡು, ಅವನ ನುಡಿ ಕೇಳಿ, ಭಾರ್ಗವನ ಗರ್ವ ಭಂಗವಾಯಿತು. ಮೊದಲು ಎಷ್ಟು ಗರ್ವಿಯಾಗಿದ್ದನೋ ಕಡೆಗೆ ಅಷ್ಟು ವಿನೀತನಾದನು. ತನ್ನ ಸಂಚಾರಶಕ್ತಿಯನ್ನು ನಾಶಪಡಿಸಬೇಡವೆಂದು ಪ್ರಾರ್ಥಿಸಿ, ತನ್ನ ಪುಣ್ಯಗಳನ್ನೆಲ್ಲ ಆ ಬಾಣಕ್ಕೆ ಒಪ್ಪಿಸಿದನು. ರಾಮನ ಬಿಲ್ಲಿನಿಂದ ಹಾರಿದ ಅಮೋಘವಾದ ಆ ವಿಷ್ಣುಬಾಣವು ಭಾರ್ಗವನ ಪುಣ್ಯಗಳನ್ನೆಲ್ಲ ತೊಡೆದುಕೊಂಡು ಹೋಯಿತು. ಪರಶುರಾಮನು ಶ್ರೀ ರಾಮನ ಉತ್ಕೃಷ್ಟತೆಯನ್ನು ಒಪ್ಪಿಕೊಂಡು, ಅವನನ್ನು ಪ್ರದಕ್ಷಿಣೆ ಮಾಡಿ, ಸ್ವಸ್ಥಾನವಾದ ಮಹೇಂದ್ರ ಪರ್ವತಕ್ಕೆ ಹೊರಟು ಹೋದನು.

ಪರಶುರಾಮನ ಬರವಿಗೆ ಬೆದರಿದ್ದವರೆಲ್ಲರೂ ಆಗ ಶಾಂತಮನಸ್ಕರಾದರು. ರಾಮನು ತಾನು ಜಯಶಾಲಿಯಾದುದಕ್ಕೆ ಗುರುಹಿರಿಯರಿಗೆಲ್ಲ ನಮಸ್ಕರಿಸಿ, ತಂದೆಯನ್ನು ಸಂತೈಸಿದನು. ಅಡಸಿದ್ದ ವಿಪತ್ತು ಕರಗಿಹೋದುದಕ್ಕೆ ಆನಂದಿಸುತ್ತ ಎಲ್ಲರೂ ಅಯೋಧ್ಯೆಗೆ ಹೋಗಿ ಸೇರಿದರು. ಪುರಪ್ರವೇಶವು ಬಹು ವಿಜೃಂಭಣೆಯಿಂದ ನಡೆಯಿತು.

ಮದುವೆ ಮುಗಿದು ಅಯೋಧ್ಯೆಗೆ ಬಂದ ಕೆಲವು ದಿನಗಳಲ್ಲಿಯೇ ಭರತನ ಸೋದರಮಾವನಾದ ಯುಧಾಜಿತ್ತನೂ ಅಲ್ಲಿಗೆ ಬಂದನು. ಅವನು ಬಂದುದು ತನ್ನ ಸೋದರಳಿಯನಾದ ಭರತನನ್ನು ಕರೆದುಕೊಂಡು ಹೋಗಲೆಂದು. ದಶರಥನು ಆತನ ಪ್ರಾರ್ಥನೆಯನ್ನು ಮನ್ನಿಸಿ ಭರತನನ್ನು ಕಳುಹಿಸಲು ಒಪ್ಪಿದನು. ಭರತನು ಜೊತೆಯಲ್ಲಿ ಶತ್ರುಘ್ನನನ್ನೂ ಕರೆದುಕೊಂಡು ಹೋಗಲು ತಂದೆ-ತಾಯಂದಿರ ಮತ್ತು ರಾಮನ ಅನುಮತಿ ಪಡೆದನು. ಅತ್ತ ಭರತ-ಶತ್ರುಘ್ನರು ಯುಧಾಜಿತ್ತಿನೊಡನೆ ಕೇಕಯ ನಗರಕ್ಕೆ ಹೋಗಲು, ಇತ್ತ ರಾಮಲಕ್ಷ್ಮಣರು ಮಾತಾಪಿತೃಗಳೇ ಸಾಕ್ಷಾತ್ಪರದೈವವೆಂದು ತಿಳಿದು ವರ್ತಿಸುತ್ತಿದ್ದರು. ಸೀತಾರಾಮರಂತೂ ಸಾಕ್ಷಾಲ್ಲಕ್ಷ್ಮೀನಾರಾಯಣರಂತೆ ಸೊಗಯಿಸುತ್ತಿದ್ದರು.

# ಪಟ್ಟಾಭಿಷೇಕ ಪ್ರಯತ್ನ

ದಶರಥನ ಮಕ್ಕಳಲ್ಲಿ ರಾಮನೇ ಹಿರಿಯವನು. ತಂದೆ ತಾಯಿಗಳು, ಸೋದರರು, ಪ್ರಜೆಗಳು ಮೊದಲಾಗಿ ಅಯೋಧ್ಯೆಗೆ ಅಯೋಧ್ಯೆಯೇ ಅವನನ್ನು ಪ್ರೀತಿಸುತ್ತಿತ್ತು. ಅನನ್ಯ ಸಾಮಾನ್ಯ ಗುಣಶಾಲಿಯಾದ ರಾಮಚಂದ್ರನಿಗೆ ಪ್ರಾಪ್ತವಯಸ್ಸಾದುದನ್ನು ಕಂಡು, ಅವನಿಗೆ ಯುವರಾಜ್ಯಾಭಿಷೇಕ ಮಾಡಬೇಕೆಂದು ದಶರಥನಿಗೆ ಮನಸಾಯಿತು. ತನ್ನ ಮಂತ್ರಿ ಪುರೋಹಿತರನ್ನೂ, ಸಾಮಂತರನ್ನೂ, ಪೌರರನ್ನೂ, ಸಭೆ ಸೇರಿಸಿದನು. ತನಗೆ ವಯಸ್ಸಾಗುತ್ತ ಬಂದಿತೆಂದೂ, ಯುವರಾಜ ಪದವಿಗೆ ರಾಮನನ್ನು ನೇಮಿಸಬಹುದೆಂದೂ ಸೂಚಿಸಿದನು. ಮಳೆಮೋಡವನ್ನು ಕಂಡು ಗುಡುಗು ಕೇಳಿದ ನವಿಲುಗಳಂತೆ, ದಶರಥನ ಮನಸ್ಸು ಕಂಡು ಮಾತು ಕೇಳಿ ಸಭಿಕರೆಲ್ಲರೂ ನಲಿದಾಡಿದರು. ಅವರಲ್ಲಿ ಒಬ್ಬನಾಗಲಿ ಬೇಡವೆನ್ನದೆ ಏಕಮನಸ್ಸಿನಿಂದ ದಶರಥನ ಮತವನ್ನೇ ಪುಷ್ಟೀಕರಿಸಿದರು.

ಅವರೆಲ್ಲರ ಆಸೆಗೆ ಸರಿಯಾಗಿ ಮಾರನೆಯ ದಿನವೇ ಸುಲಕ್ಷಣವಾದ ಮುಹೂರ್ತವಿತ್ತು. ಅದೆ ಮುಹೂರ್ತದಲ್ಲಿ ಪಟ್ಟಾಭಿಷೇಕವಾಗಬೇಕೆಂದು ನಿರ್ಧರವಾಯಿತು. ಜನಗಳ ಸಂಭ್ರಮ, ಉತ್ಸಾಹ ಹೇಳತೀರದು. ಎಲ್ಲರೂ ರಾತ್ರಿಯೇ ರಾತ್ರಿ ಕೆಲಸ ಮಾಡಿದರು. ಊರ ಬೀದಿಗಳನ್ನೆಲ್ಲ ಶುಭ್ರವಾಗಿ ಗುಡಿಸಿ, ನೀರು ಎರಚಿ, ತಳಿರುತೋರಣಗಳನ್ನೂ ಬಣ್ಣಬಣ್ಣದ ಪತಾಕೆಗಳನ್ನೂ ಕಟ್ಟಿ ಸಿಂಗರಿಸಿದರು. ಬೀದಿ, ಮನೆ, ದೇವಾಲಯ ಎಲ್ಲೆಲ್ಲಿಯೂ ಶೃಂಗಾರ. ಮಂಗಳವಾದ್ಯಗಳಿಗೆ ಮೊದಲಿಲ್ಲ, ಕೊನೆಯಿಲ್ಲ. ರಾತ್ರಿ ಬೆಳಗಾಗುವ ವೇಳೆಗೆ ಪಟ್ಟಣದ ಬಣ್ಣವೇ ಬದಲಾಯಿಸಿ ಹೋಗಿತ್ತು.

ಊರಿನಲ್ಲಿ ಇಷ್ಟೆಲ್ಲಾ ಸಂಭ್ರಮ ಜರಗುತ್ತಿರುವುದನ್ನು ಮಂಥರೆಯೆಂಬುವಳು ನೋಡಿದಳು. ಅವಳು ಕೈಕೇಯಿಯ ದಾಸಿ. ಅಷ್ಟು ಸಂಭ್ರಮವೇಕೆಂದು ಅವಳಿಗೆ ಗೊತ್ತಿರಲಿಲ್ಲ. ಯಾರನ್ನೋ ಕೇಳಿದಳು. ಅಂದೇ ರಾಮನಿಗೆ ಪಟ್ಟಾಭಿಷೇಕವೆಂದು ಅವಳಿಗೆ ತಿಳಿಯಿತು. ಅವಳಿಗೆ ಮಾತ್ರ ರಾಮನನ್ನು ಕಂಡರಾಗುತ್ತಿರಲಿಲ್ಲ. ರಾಮನಿಗೆ ಪಟ್ಟಾಭಿಷೇಕವೆಂಬ ಮಾತು ಕೇಳಿ ಅವಳಿಗೆ ಹೊಟ್ಟೆಯಲ್ಲಿ ಉರಿ ಹಾಕಿದ ಹಾಗಾಯಿತು. ಕೇಳಿದ

ಕ್ಷಣವೇ ಗುಡಗುಡನೆ ಅರಮನೆಗೆ ಓಡಿ, ಕೈಕೇಯಿಯ ಅಂತಃಪುರಕ್ಕೆ ನುಗ್ಗಿದಳು. ಕೈಕೇಯಿಯು ಏನೊಂದೂ ಯೋಚನೆಯಿಲ್ಲದೆ ಹಾಸಿಗೆಯಲ್ಲಿ ಇನ್ನೂ ಮೈ ಮುದುರಿ ಮಲಗಿದ್ದಳು. ಅದು ಕಂಡು ಮಂಥರೆಗೆ ತಡೆಯಲಾರದೆ ಹೋಯಿತು. ಅವಳಿಗೆ ಕೈಕೇಯಿಯಲ್ಲಿ ಸಲುಗೆಯಿತ್ತು. ಕೈಕೇಯಿಯನ್ನು ಹಿಡಿದಲುಗಿಸಿ ಎಬ್ಬಿಸಿದಳು.

"ಮೂರ್ಖೆ! ಸರ್ವನಾಶವಾಯಿತು. ಎದ್ದೇಳು. ಮನೆ ಮುಳುಗಿ ಹೋಗುವಾಗಲೂ ಹೀಗೆ ಮುದುರಿ ಮಲಗುವರೆ!" ಎಂದು ಅಬ್ಬರಿಸಿದಳು.

ಕೈಕೇಯಿಗೆ ಅವಳ ಮಾತು ಅರ್ಥವಾಗಲಿಲ್ಲ. ಆಗ ಮಂಥರೆಯು ರಾಮನಿಗೆ ಅಂದು ಪಟ್ಟಾಭಿಷೇಕವೆಂದೂ, ಅದರಿಂದ ಭರತನಿಗೆ ಏನೂ ಇಲ್ಲದೆ ಹೋಗುವುದೆಂದೂ ಬಗೆಬಗೆಯಾಗಿ ಬಣ್ಣಿಸಿ, ತನ್ನ ಅಸಹನೆಯನ್ನು ತೋರಿಸಿದಳು. ಆದರೆ ಅವಳು ಎಣಿಸಿದ್ದಂತೆ ಕೈಕೇಯಿಯು ಉರಿದುಬೀಳಲಿಲ್ಲ. ಕೈಕೇಯಿಗೆ ಭರತನ ಮೇಲೆ ಎಷ್ಟು ಪ್ರೇಮವಿತ್ತೊ, ರಾಮನ ಮೇಲೆಯೂ ಅಷ್ಟೇ ಇತ್ತು. ರಾಮನಿಗೆ ಪಟ್ಟಾಭಿಷೇಕವಾದರೆ ಭರತನಿಗೆ ಆದಂತೆಯೆ ಎಂದು ಅವಳು ತಿಳಿದಿದ್ದಳು. ಮಂಥರೆಯ ಮಾತಿನಿಂದ ಅವಳಿಗೆ ಸಂತೋಷವಾಯಿತಲ್ಲದೆ ಬೇರೆಯಲ್ಲ.

ಕೈಕೇಯಿಯ ಮನೋವೃತ್ತಿಯನ್ನು ಮಂಥರೆಯು ತಿಳಿದಳು. ತಿಳಿದು, ಮಾತಿನ ಮಾರ್ಗವನ್ನು ಬೇರೆ ಮಾಡಿದಳು ರಾಮನಿಗೆ ಪಟ್ಟಾಭಿಷೇಕವಾದರೆ ಅವನ ತಾಯಿಯಾದ ಕೌಸಲ್ಯೆಯೇ ಮೇಲಾಗುವಳು. ಆಗ ದಶರಥನು ಅವಳ ಮಾತಿನಂತೆ ನಡೆಯುವನು. ಇದುವರೆಗೆ ಆಡುತ್ತಿದ್ದಂತೆ ಕೈಕೇಯಿಯು ರಾಮನು ರಾಜನಾದ ಮೇಲೆ ಆಡುವಂತಿಲ್ಲ ದಶರಥನು ಕಿರಿಯ ರಾಣಿಯನ್ನು ಕಸಕ್ಕಿಂತಲೂ ಕೀಳಾಗಿ ಕಾಣುವನು. ಎಂದು ಮೊದಲಾಗಿ ಮಂಥರೆಯು, ಹೇಳಬೇಕಾದ ಒಂದು ಮಾತನ್ನು, ಹತ್ತು ವಿಧದಲ್ಲಿ, ನೂರು ತೆರದಲ್ಲಿ, ಕುಕ್ಕಿ ಕುಕ್ಕಿ ಹೇಳಿದಳು. ವಿಷದ ಬೀಜವನ್ನು ಚೆನ್ನಾಗಿ ಬಿತ್ತಿದಳು. ಮಂಥರೆಯ ಯುಕ್ತಿಯ ಮಾತುಗಳಿಗೆ ಕೈಕೇಯಿಯು ಮನಸೋತಳು. ಅವಳು ಹೇಳಿದುದು ವಾಸ್ತವವೆಂದೇ ನಂಬಿದಳು. ಭರತನಿಗಲ್ಲದೆ ರಾಮನಿಗೆ ಪಟ್ಟಗಟ್ಟಲು ಪ್ರಯತ್ನಪಟ್ಟುದಕ್ಕಾಗಿ ದಶರಥನ ಮೇಲೆ ರೇಗಿದಳು.

ರೇಗಿ ರೇಗಿ, ಕಡೆಗೆ, ತಾನು ಪಟ್ಟಾಭಿಷೇಕವನ್ನು ತಡೆಯುಲಾರದ ಅಸಹಾಯತೆಗಾಗಿ ಅಳಲು ಮೊದಲುಮಾಡಿದಳು.

ಮಂಥರೆಯ ಮಾಯ ಇನ್ನೂ ಮುಗಿದಿರಲಿಲ್ಲ.

"ಮುಗ್ಧೆ! ರಾಮನ ಪಟ್ಟಾಭಿಷೇಕವನ್ನು ನಿಲ್ಲಿಸಿ, ಭರತನಿಗೆ ಯುವರಾಜ ಪದವಿಯನ್ನು ಕೊಡಿಸಲು ನಿನ್ನ ಕೈಲಾಗದೆ? ಕೇಳು. ಹಿಂದೆ ದೇವಾಸುರ ಯುದ್ಧದಲ್ಲಿ ದಶರಥನ ರಥದ ಗಾಲಿಯು ಮುರಿದಾಗ ನೀನು ಅವನಿಗೆ ಸಹಾಯ ಮಾಡಿದುದು ಮರೆತೆಯ? ಆಗ ಅವನು ಪ್ರೀತನಾಗಿ ನಿನ್ನನ್ನು ಎರಡು ವರ ಕೇಳೆಂದುದು ನೆನಪಿದೆಯೆ? ಅವುಗಳನ್ನು ಆಗ ನೀನು ಕೇಳಲಿಲ್ಲ. ಈಗ ಕೇಳು. ಒಂದು, ಹದಿನಾಲ್ಕು ವರುಷ ರಾಮನ ವನವಾಸ. ಇನ್ನೊಂದು, ಭರತನ ಯೌವರಾಜ್ಯಾಭಿಷೇಕ".

ಮಂಥರೆಯ ಸಲಹೆಯನ್ನು ಕೈಕೇಯಿಯು ಒಪ್ಪಿದಳು. ಮುಂದಿನ ಕೆಲಸವೇನೆಂದು ಇಬ್ಬರೂ ಕುಳಿತು ಆಲೋಚಿಸಿದರು. ಆ ಆಲೋಚನೆಯ ಫಲವಾಗಿ ಕೈಕೇಯಿಯು ತನ್ನ ವಸ್ತ್ರಮಾಲ್ಯಾದಿಗಳನ್ನೆಲ್ಲ ಕಳೆದು ಬಿಸುಟು, ಕೊಳೆ ಬಟ್ಟೆಯುಟ್ಟಳು. ತಲೆ ಕೆದರಿಕೊಂಡು ಕೋಪಗೃಹದಲ್ಲಿ ಹೋಗಿ ಉರುಳಿದಳು. ಕೋಪಗೃಹವೆಂಬುದು ರಾಣಿಯರ ಉಪಯೋಗಕ್ಕಾಗಿಯೇ ಇಡುತ್ತಿದ್ದ ಪ್ರತ್ಯೇಕವಾದ ಮನೆ. ರಾಣಿಯರಿಗೆ ಕೋಪ ಬಂದಾಗ ಅವರು ಆ ಕೋಪಗೃಹಕ್ಕೆ ಹೋಗಿಬಿಡುವರು. ಆಗ ಅರಸನು ಹೋಗಿ ಅವರ ಕೋಪವನ್ನು ಸಮಾಧಾನ ಮಾಡಿ ಕರೆತರುವನು. ಅದು ಅಲ್ಲಿಯ ವಾಡಿಕೆಯಾಗಿತ್ತು.

ಕೊಂಚ ಹೊತ್ತಿನಲ್ಲಿಯೇ ದಶರಥನು ರಾಮಪಟ್ಟಾಭಿಷೇಕದ ಸುದ್ದಿಯನ್ನು ತಿಳಿಸಬೇಕೆಂದು ಸಡಗರದಿಂದ ಕೈಕೇಯಿಯ ಅಂತಃಪುರಕ್ಕೆ ಬಂದನು. ಆದರೆ ಎಂದಿನಂತೆ ಪ್ರೀತಿಪೂರ್ವಕವಾಗಿ ತನ್ನನ್ನು ಎದುರುಗೊಳ್ಳುವುದು ಬಿಟ್ಟು, ಕೈಕೇಯಿಯು ಕೋಪಗೃಹಕ್ಕೆ ಹೋಗಿರುವುದು ದಶರಥನಿಗೆ ಅರ್ಥವಾಗಲಿಲ್ಲ. ಕೋಪಗೃಹಕ್ಕೆ ಹೋಗಿ ಕೈಕೇಯಿಯನ್ನು ಸಂತೈಸಲು ಯತ್ನಿಸಿದನು. ತನಗೆ ಹಿಂದಿನ ಎರಡು ವರಗಳನ್ನು ಕೊಡದಿದ್ದುದೇ ತನ್ನ ವ್ಯಥೆಗೆ ಕಾರಣವೆಂದು ಕೈಕೇಯಿಯು ಮಹಾರಾಜನಿಗೆ ನಂಬಿಸಿದಳು. ತನ್ನ ಚಾತುರ್ಯವನ್ನೆಲ್ಲಾ ಉಪಯೋಗಿಸಿ ಅಂದಿನ ಎರಡು ವರಗಳನ್ನು ಇಂದು

ಕೊಡುತ್ತೇನೆಂದು ದಶರಥನಿಂದ ವಾಗ್ದಾನ ತೆಗೆದುಕೊಂಡಳು. ಹೀಗೆ ದಶರಥ ನನ್ನು ಆಡಿದ ಮಾತಿಗೆ ತಪ್ಪದ ರೀತಿ ಸಿಲುಕಿಸಿ, ಕಡೆಗೆ ತನ್ನ ಎರಡು ವರ ಗಳನ್ನು, ಮಂಥರೆಯು ಹೇಳಿಕೊಟ್ಟ ವರಗಳನ್ನು, ಕೇಳಿದಳು. ಅರಸನಿಗೆ ದಿಗ್ಭ್ರಮೆಯಾಯಿತು. ಆ ಎರಡು ವರಗಳನ್ನುಳಿದು ಬೇರೆ ಏನನ್ನಾದರೂ ಬೇಡುವಂತೆ ಎಷ್ಟೆಷ್ಟೋ ಸಾಹಸ ಮಾಡಿದನು. ಆದರೆ ಮಂಥರೆಯ ಬೋಧ ನೆಯು ಕೈಕೇಯಿಯ ಮನಸ್ಸಿನಲ್ಲಿ ಬಲವಾಗಿ ಬಲಿದಿತ್ತು; ಅವಳು ತನ್ನ ಹಟದಿಂದ ಇಷ್ಟೂ ಅಲುಗುವಂತಿರಲಿಲ್ಲ. ದೊರೆಯು ತನ್ನ ಮಾತಿನಲ್ಲಿ ತಾನು ಪಾರಾಗದ ರೀತಿ ಸಿಕ್ಕಿಬಿದ್ದೆನೆಂದು ತಿಳಿದು ನಿರಾಶನಾದನು.

ಪಟ್ಟಾಭಿಷೇಕದ ದಿನ ಪುರಜನರ ಸಡಗರವೇ ಸಡಗರ. ಅವರ ಕೋಲಾಹಲವೇ ಕೋಲಾಹಲ. ಬೀದಿಗಳಲ್ಲಿ ಜನರು ಹಿಡಿಸದಷ್ಟು ಗಿಜಿಗಿಜಿ. ಪಟ್ಟಾಭಿಷೇಕದ ಗಳಿಗೆ ಸಮೀಪಿಸುತ್ತ ಬಂದಿತು. ಅಲ್ಲಿಗೆ ಬೇಕಾದ ಸಾಮಗ್ರಿ ಗಳೆಲ್ಲ ಅಣಿಯಾಗಿದ್ದುವು. ಗಂಗಾ ಯಮುನೆಗಳ ಸಂಗಮದಿಂದ ತಂದ ನೀರು ಸುವರ್ಣ ಕಲಶಗಳಲ್ಲಿ ತುಂಬಿ ನಿಂತಿತ್ತು. ಹೊಸದಾಗಿ ಅರಳಿದ ಕಮಲಗಳು, ಹಾಲು, ಮೊಸರು, ಜೇನುತುಪ್ಪ, ಬೆಣ್ಣೆ, ತುಪ್ಪ ಮುಂತಾದ ಸಂಭಾರಗಳು, ದರ್ಭೆ, ಸಮಿತ್ತುಗಳು, ಮಂಗಳದ್ರವ್ಯಗಳು, ಅಷ್ಟಕನ್ನಿಕೆಯರು, ಪಟ್ಟದ ಆನೆ, ಕುದುರೆ, ಹಸುಗಳು, ಬಿಳಿಯ ಚಾಮರ, ಶ್ವೇತಚ್ಛತ್ರ ಮೊದ ಲಾಗಿ ಒಂದುಳಿಯದೆ ಎಲ್ಲಾ ಅಲ್ಲಿ ಸಿದ್ಧವಾಗಿತ್ತು.

ವೇಳೆಗೆ ಸರಿಯಾಗಿ ರಾಮನು ತನ್ನ ಅರಮನೆಯಿಂದ ತಂದೆಯ ಆಜ್ಞೆ ಯನ್ನು ಪಾಲಿಸಲೋಸುಗ ಹೊರಹೊರಟನು. ದಾರಿಯಲ್ಲಿ ಜನರ ಜಯ ಜಯಕಾರವನ್ನು ನಮಸ್ಕಾರಪೂರ್ವಕವಾಗಿ ಸ್ವೀಕರಿಸಿ ಮುಂದೆ ಹೊರಟನು. ಮುಂದೇನಾಗುವುದೆಂದು ಯಾರಿಗೂ ಗೊತ್ತಿರಲಿಲ್ಲ. ರಾಮನು ಅರಮನೆಯ ಬಳಿ ಇಳಿದು, ಅರಸನನ್ನು ಹುಡುಕಿಕೊಂಡು ಕೈಕೇಯಿಯ ಅಂತಃಪುರಕ್ಕೆ ಹೋದನು. ದಶರಥನು ದುಃಖ ಅವಮಾನಗಳಿಂದ ನಿಶ್ಚೇಷ್ಟಿತನಾಗಿ ಕುಳಿತು ಬಿಟ್ಟಿದ್ದನು. ಪ್ರೀತಿಯಿಂದ ಮುಂದೆ ಬಂದ ರಾಮನನ್ನು ಮಾತನಾಡಿಸಲು ಅವನಿಗೆ ಬಾಯೇ ಬರಲಿಲ್ಲ. ತಾನು ಮರುಳಾಗಿ ಮಾತು ಕೊಟ್ಟುದನ್ನು ಏನೆಂದು ಹೇಳಿಕೊಂಡಾನು! ಅವನು ಉಸಿರದಿದ್ದುದು ಕಂಡು, ಕೈಕೇಯಿಯು ತಾನೇ ಹೇಳಿದಳು.

"ರಾಮ! ಹಿಂದೆ ನಾನು ಮಾಡಿದ ಉಪಕಾರಕ್ಕಾಗಿ ನಿನ್ನ ತಂದೆಯು ನನಗೆ ಎರಡು ವರ ಕೊಟ್ಟಿದ್ದನು. ಅವುಗಳನ್ನು ಅಂದು ಕೇಳಿರಲಿಲ್ಲ, ಇಂದು ಕೇಳಿದ್ದೇನೆ. ನನ್ನ ಮಗ ಭರತನು ಯುವರಾಜನಾಗಬೇಕೆಂಬುದು ಮೊದಲನೆಯ ವರ. ನೀನು ಹದಿನಾಲ್ಕು ವರ್ಷ ವನವಾಸವಿರಬೇಕೆಂಬುದು ಎರಡನೆಯ ವರ. ರಾಮ! ನಿನ್ನ ತಂದೆಯು ನನಗೆ ನೀಡಿದ ವರಗಳಿವು. ಅವನ ಮಾತನ್ನು ನಡೆಸಿಕೊಡುವ ಭಾರ ನಿನ್ನದು".

ಆ ಮಾತನ್ನು ಕೇಳಿಯೂ ರಾಮನ ಗಂಭೀರ ವೃತ್ತಿಗೆ ಚ್ಯುತಿ ಬರಲಿಲ್ಲ. ಆಕೆಯ ಮಾತನ್ನು ಶಿರಸಾ ವಹಿಸುವೆನೆಂದು ಅವಳಿಗೆ ನಮಸ್ಕರಿಸಿ "ತಂದೆಯ ಮಾತನ್ನು ಅವಶ್ಯವಾಗಿ ನಡೆಸಿಕೊಡುವೆನು. ಆದರೆ ಎಂದಿನಂತೆ ಪ್ರೀತಿ ಪೂರ್ವಕವಾಗಿ ನನ್ನನ್ನು ಕರೆದು ಮಾತನಾಡಿಸಬಾರದೆ, ತಂದೆ!" ಎಂದು ಬೇಡಿದನು ಆ ಮಾತು ಕೇಳಿ ದಶರಥನಿಗೆ ತಡೆಯಲಾರದೆ ಹೋಯಿತು. ಶೋಕ ಮಿತಿಮೀರಿ ಮೂರ್ಛೆಹೋದನು.

ಇಷ್ಟರಲ್ಲಿ ಪಟ್ಟಾಭಿಷೇಕವು ನಿಂತುಹೋದ ಮಾತು ಊರಲ್ಲೆಲ್ಲ ದಾವಾಗ್ನಿಯಂತೆ ಹಬ್ಬಿಕೊಂಡಿತು. ಎಲ್ಲರೂ ದಶರಥನನ್ನು ನಿಂದಿಸುವವರೆ. ಎಲ್ಲರೂ ಕೈಕೇಯಿಯನ್ನು ಬಯ್ಯುವವರೆ. ಎಲ್ಲರೂ ರಾಮನನ್ನು ಕನಿಕರಿಸುವವರೆ. ಆದರೆ ರಾಮನು ಮಾತ್ರ ಅಚಲನಾಗಿದ್ದನು. ತನ್ನ ಪಟ್ಟಾಭಿಷೇಕವು ನಿಂತು ಹೋದುದಕ್ಕಾಗಿ ಕೊಂಚವೂ ಚಿಂತಿಸದೆ, ತಂದೆಯ ಮಾತನ್ನು ನಡೆಸುವುದೊಂದನ್ನೇ ಗಮನದಲ್ಲಿಟ್ಟು, ಕಾಡಿಗೆ ಹೋಗಲು ಸಿದ್ಧಪಡಿಸಿಕೊಳ್ಳುತ್ತಿದ್ದನು. ರಾಮನನ್ನು ಎಂದಿನಿಂದಲೂ ಅಗಲದಿದ್ದ ಲಕ್ಷ್ಮಣನು ಈಗ ಅಯೋಧ್ಯೆಯಲ್ಲಿ ನಿಲ್ಲುವಂತಿರಲಿಲ್ಲ. ರಾಮನನ್ನು ಕಾಡಿ, ಬೇಡಿ, ತಾನೂ ಜೊತೆಯಲ್ಲಿ ಅರಣ್ಯಕ್ಕೆ ತೆರಳಲು ಅನುಮತಿ ಪಡೆದನು. ಸೀತೆಯು ತಾನೂ ರಾಮನೊಡನೆ ವನವಾಸಕ್ಕೆ ಸಿದ್ಧಳಾದಳು. ರಾಮನು ಎಷ್ಟೆಷ್ಟೋ ವಿಧಗಳಲ್ಲಿ ಅವಳನ್ನು ನಿವಾರಿಸಲು ಪ್ರಯತ್ನಿಸಿದನು. ಆದರೆ ಸೀತೆಯು ಪಾತಿವ್ರತ್ಯದ ತುಟ್ಟತುದಿಯ ಮೆಟ್ಟಲಿನವಳು. ಕಡೆಗೆ ರಾಮನೇ ಅವಳಿಗೆ ಸೋಲಬೇಕಾಯಿತು. ಸೀತಾ ರಾಮ ಲಕ್ಷ್ಮಣರು ಮೂವರೂ ವನವಾಸ ಹೋಗುವುದು ನಿಶ್ಚಯವಾಯಿತು.

ಮಂತ್ರಿಗಳೇ ಮುಂತಾದವರು ಕೈಕೇಯಿಯ ಮನಸ್ಸನ್ನು ಬದಲಾಯಿ

ಸಲು ಹೇಳಬಹುದಾದುದನ್ನೆಲ್ಲ ಹೇಳಿದರು ಆದರೆ ಕೈಕೇಯಿಯು ತನ್ನ ಪಟ್ಟು ಸಡಲಿಸುವಂತಿರಲಿಲ್ಲ. ತಾನೇ ನಾರುಮಡಿಯನ್ನು ತಂದು ಸೀತಾ ರಾಮಲಕ್ಷ್ಮಣರಿಗೆ ಕೊಟ್ಟಳು. ಸೀತೆಯು ನಾರುಮಡಿಯುಡುವದಕ್ಕೆ ಗುರು ಹಿರಿಯರೆಲ್ಲರೂ ವಿರೋಧಿಸಿ ನಿಂತರು. ಅವರ ಅಪ್ಪಣೆಯಂತೆ ಸೀತೆಯು ತನ್ನ ವಸ್ತ್ರಾಭರಣಗಳನ್ನು ತೆಗೆದು ಹಾಕದಿದ್ದರೂ, ರಾಮನು ನಾರುಮಡಿಯುಟ್ಟು ದರಿಂದ ತಾನೂ ನಾರುಮಡಿಯನ್ನೂ ತೆಗೆದುಕೊಂಡಳು.

ಮೂವರೂ ವನವಾಸಕ್ಕೆ ಸಿದ್ಧರಾದರು. ದಶರಥನಿಗೂ ಕೌಸಲ್ಯೆ, ಸುಮಿತ್ರೆ, ಕೈಕೇಯಿಯರಿಗೂ ನಮಸ್ಕರಿಸಿದರು. ಮಂತ್ರಿ ಪುರೋಹಿತಾದಿ ಗುರುಹಿರಿಯರ ಆಶೀರ್ವಚನವನ್ನು ಬೇಡಿ, ತಮ್ಮನ್ನು ಒಯ್ಯಲು ಸಿದ್ಧವಾಗಿದ್ದ ರಥವನ್ನು ಏರಿದರು. ರಾಜ್ಯದ ಮುಖ್ಯ ಮಂತ್ರಿಯಾದ ಸುಮಂತ್ರನು ತಾನೇ ರಥ ನಡೆಸಲು ಕುಳಿತಿದ್ದನು. ಅವನಿಗೆ ಸೀತಾರಾಮಲಕ್ಷ್ಮಣರಲ್ಲಿ ಬಹಳ ವಾತ್ಸಲ್ಯವಿತ್ತು.

ವನವಾಸಕ್ಕೆ ಹೊರಟ ರಾಮನನ್ನು ಬಿಡಲಾರದೆ ಪಟ್ಟಣಕ್ಕೆ ಪಟ್ಟಣವೇ ದುಃಖದಿಂದ ಅವನ ಹಿಂದೆ ಹೊರಟಿತು.



# ವನಾಂತರ ಗಮನ

ರಾಮನಲ್ಲಿ ಅನುರಾಗವಿದ್ದ ಅನೇಕ ಪ್ರಜೆಗಳು ಬಹು ದೂರ ಅವನನ್ನು ಹಿಂಬಾಲಿಸಿ ಹೋದರು. ಅವರನ್ನು ಹಿಂದಿರುಗಿಸಲು ರಾಮನು ಮಾಡಿದ ಪ್ರಯತ್ನಗಳೆಲ್ಲಾ ವಿಫಲವಾದುವು. ಕಡೆಗೆ, ತನ್ನ ರಥದ ಹಿಂದೆ ಪ್ರಜೆಗಳು ನಡೆದೇ ಬರುವುದನ್ನು ಕಂಡು, ಸೀತಾ ರಾಮ ಲಕ್ಷ್ಮಣರು ತಾವೂ ಪಾದಚಾರಿಗಳಾಗಿ ಹೊರಟರು. ಹೀಗೆ ಹೊರಟವರು ಸಂಜೆಯಾಗುವ ವರೆಗೆ ನಡೆದು, ದಾರಿಯಲ್ಲಿ ಸಿಕ್ಕಿದ ತಮಸಾನದಿ ತೀರದಲ್ಲಿ ತಂಗಿದರು. ಪ್ರಜೆಗಳ ಅನುರಾಗವನ್ನು ಕಂಡು ಮೆಚ್ಚಿದ ರಾಮನಿಗೆ ತನ್ನ ಕಷ್ಟದಲ್ಲಿ ಅವರೂ ಭಾಗಿಗಳಾಗುವುದು ಇಷ್ಟವಿರಲಿಲ್ಲ. ಆದಕ್ಕಾಗಿ ಬೆಳಗಿನ ಜಾವದಲ್ಲಿ ಪ್ರಜೆಗಳಿನ್ನೂ ಮಲಗಿರುವಾಗಲೇ ಸುಮಂತ್ರನನ್ನು ಎಬ್ಬಿಸಿದನು; ತಮ್ಮನನ್ನೂ ಪತ್ನಿಯನ್ನೂ ಕರೆದುಕೊಂಡು, ಪ್ರಜೆಗಳಿಗೆ ತಿಳಿಯದಂತೆ ಮುಂದೆ ಪ್ರಯಾಣ ಮಾಡಿದನು. ಕಾಡಿಗೆ ಹೋದವರನ್ನು ಜನವು ಅನುಸರಿಸಿ ಹೋಗದಿರಲೆಂದು ರಥವು ಬಳಸಿ, ಹೋದ ಮಾರ್ಗವನ್ನು ಮರೆಸಿ, ಮುಂದುವರಿಯಿತು. ಪ್ರಜೆಗಳು ಬೆಳಗ್ಗೆ ಎದ್ದವರು, ರಾಮನನ್ನು ಕಾಣದೆ ಸುತ್ತ ಮುತ್ತ ಅರಸಿದರು, ಗೋಳಾಡಿದರು. ಕಡೆಗೆ, ತಮ್ಮನ್ನು ವಂಚಿಸಿ ಕಾಡಿಗೆ ಹೊರಟೇ ಹೋದರೆಂದು ಸಂಕಟಪಡುತ್ತ ಅಯೋಧ್ಯೆಗೆ ಹಿಂದಿರುಗಿದರು.

ಬೆಳಗಿನ ಜಾವದಲ್ಲಿಯೇ ಪ್ರಯಾಣ ಬೆಳೆಸಿದವರು ಬೆಳಗಾಗುವ ವೇಳೆಗೆ ಕೋಸಲದೇಶದ ಎಲ್ಲೆಕಟ್ಟನ್ನು ಮುಟ್ಟಿದರು. ಗೋಮತಿ, ಸ್ಯಂದಿಕೆ ಎಂಬ ನದಿಗಳನ್ನು ದಾಟಿ, ದಾರಿಯಲ್ಲಿ ತನ್ನನ್ನು ಕಂಡು ಕರಗಿದವರಿಗೆಲ್ಲ ಸಮಾಧಾನ ಹೇಳುತ್ತ, ರಾಮನು ಕೋಸಲವನ್ನು ದಾಟಿ ಗಂಗಾತೀರಕ್ಕೆ ಬಂದನು. ಅಲ್ಲಿ ಕೊಂಚ ಹೊತ್ತು ನಿಂತು, ಅವರು ತಮ್ಮ ತವರೂರಾದ ಅಯೋಧ್ಯಾ ನಗರದ ಕಡೆಗೆ ತಿರುಗಿ ಕೈಮುಗಿದು ಮುಂದುವರಿದರು. ದಾರಿಯಲ್ಲಿ ಗಂಗಾ ನದಿಯ ಮನೋಹರ ದೃಶ್ಯವನ್ನು ಕಾಣುತ್ತ ಬರುತ್ತಿರಲು ಶೃಂಗಿಬೇರ ಪುರವು ಸಿಕ್ಕಿತು.

ಶೃಂಗಿಬೇರ ಪುರವು ಬೇಡರ ಊರು. ಆ ಬೇಡರ ಪ್ರಮುಖನಾದ ಗುಹನು ರಾಮನ ಮಿತ್ರನು. ಆತನು ಸೀತಾ ರಾಮ ಲಕ್ಷ್ಮಣರಿಗೂ ಸುಮಂತ್ರ

ನಿಗೂ ಪರಮಾದರದಿಂದ ಸ್ವಾಗತ ಬಯಸಿ ಉಪಚರಿಸಿದನು. ರಾಮನು ಆ ರಾತ್ರಿ ಗುಹನ ಆತಿಥ್ಯವನ್ನು ಸ್ವೀಕರಿಸಿ, ಬೆಳಗ್ಗೆ ಪ್ರಯಾಣವನ್ನು ಮುಂದು ವರಿಸಲು ಸಿದ್ಧನಾದನು. ಸಿದ್ಧನಾಗಿ, ತನ್ನೊಡನೆಯೇ ಬರುವೆನೆಂದು ಮುಷ್ಕರಮಾಡಿದ ವೃದ್ಧಮಂತ್ರಿ ಸುಮಂತ್ರನನ್ನು ಅನೇಕ ಮಾತುಗಳಿಂದ ಅಯೋಧ್ಯೆಗೆ ಹಿಂದಿರುಗಿಸಿದನು. ಸುಮಂತ್ರನನ್ನು ಹಿಂದಿರುಗಲೊಪ್ಪಿಸಿ, ಸೀತಾ ರಾಮ ಲಕ್ಷ್ಮಣರು ಗುಹನು ಸಿದ್ಧಗೊಳಿಸಿದ ನಾವೆಯಲ್ಲಿ ಕುಳಿತು ಗಂಗಾನದಿಯನ್ನು ದಾಟಿ ವತ್ಸದೇಶಕ್ಕೆ ಬಂದರು. ಲಕ್ಷ್ಮಣನು ತನ್ನೊಡನೆ ಏಕೆ ಕಾಡಿನಲ್ಲಿ ಅಲೆಯಬೇಕು, ಅಯೋಧ್ಯೆಗೆ ಹಿಂದಿರುಗಲಿ ಎಂದು ರಾಮನು ಮತ್ತೊಮ್ಮೆ ಹೇಳಿ ನೋಡಿದನು. ಲಕ್ಷ್ಮಣನು ತನ್ನ ಮೊದಲಿನ ನಿಶ್ಚಯ ದಿಂದ ಎಳ್ಳಷ್ಟೂ ಕದಲುವಂತಿರಲಿಲ್ಲ. ಸೀತೆ ಕೂಡ, ಎಂದೂ ನಡೆದು ಅರಿಯದವಳು, ಆಯಾಸವಾದರೂ ಪತಿಯೊಡನಿರುವುದೇ ಪರಮಪದವೆಂದು ಭಾವಿಸಿ, ಆಯಾಸವನ್ನು ಮರೆತು ಉತ್ಸಾಹದಿಂದ ರಾಮನೊಡನೆ ನಡೆದಳು. ಆ ರಾತ್ರಿ ತಾವು ಬೇಟೆಯಾಡಿದ ಮೃಗ ಮಾಂಸವನ್ನು ತಿಂದು, ಮೂವರೂ ಆ ಘೋರಾರಣ್ಯದ ಒಂದು ಆಲದ ಮರದಡಿಯಲ್ಲಿ ಮಲಗಿದರು.

ಮಲಗಿದವರು ಸೂರ್ಯೋದಯಕ್ಕೆ ಸರಿಯಾಗಿ ಎದ್ದು ಅರಣ್ಯ ಮಧ್ಯಕ್ಕೆ ನಡೆದು ಮುಂದೆ ಕಾಣುತ್ತಿದ್ದ ಹೋಮಧೂಮದ ಜಾಡು ಹಿಡಿದು, ಭರದ್ವಾಜ ಮಹರ್ಷಿಯ ಆಶ್ರಮಕ್ಕೆ ಬಂದರು. ಭರದ್ವಾಜನು ಅವರ ಪೂರ್ವೋತ್ತರ ಗಳನ್ನು ಕೇಳಿ ತಿಳಿದು, ಅತಿಥಿಸತ್ಕಾರ ನಡೆಸಿದನು. ಸೀತಾರಾಮರು ಆ ರಾತ್ರಿ ಯನ್ನು ಭರಧ್ವಾಜಾಶ್ರಮದಲ್ಲಿಯೆ ಕಳೆದು, ಮರುದಿನ ಮುಂದೆ ಸಾಗಲು ಬಯಸಿದರು. ಭರದ್ವಾಜಾಶ್ರಮ ಪ್ರಾಂತವು ಗಂಗಾ ಯಮುನೆಗಳ ಸಂಗಮ ದಿಂದ ಪವಿತ್ರವಾದುದು, ಜನ ಸಂಚಾರವಿಲ್ಲದೆ ಶಾಂತವಾದುದು, ರಮಣೀಯ ವಾದುದು. ಮುಂದೆ ಹೋಗದೆ, ಅಂತಹ ತಪೋವನದಲ್ಲಿಯೇ ನೆಲಸಬಹು ದೆಂದು ಭರದ್ವಾಜನು ಸೂಚಿಸಿದನು. ಆದರೆ ಆ ಆಶ್ರಮವು ಪಟ್ಟಣಗಳಿಗೂ ಗ್ರಾಮಗಳಿಗೂ ಬಹು ಸಮೀಪದಲ್ಲಿತ್ತು. ಸೀತೆಯನ್ನೂ ತನ್ನನ್ನೂ ನೋಡಲು ಜನರು ಆಗಾಗ್ಗೆ ಬಂದಾರೆಂದು ರಾಮನಿಗೆ ಹೆದರಿಕೆಯಿತ್ತು. ಜನಗಳ ದೃಷ್ಟಿಗೆ ಬೀಳದೆ ಏಕಾಂತವಾಗಿರಬೇಕೆಂದು ಅವನ ಆಸೆ. ಸುಖವನ್ನೇ ಕಂಡು, ಎಂದೂ ಕಷ್ಟವನ್ನು ಕಾಣದ ಸೀತೆಯ ವಿಹಾರಕ್ಕೆ ಇನ್ನೂ ಉತ್ತಮ

ವಾದ ಪ್ರದೇಶದಲ್ಲಿ ನೆಲಸಬೇಕೆಂದು ರಾಮನ ಮನಸು. ಹೀಗೆ ರಾಮನ ದೃಷ್ಟಿಯನ್ನು ಕಂಡುಕೊಂಡ ಭರದ್ವಾಜನು, ಎಲ್ಲ ಭಾಗಗಳಲ್ಲಿಯೂ ಚಿತ್ರ ಕೂಟ ಪರ್ವತವೇ ಅವರಿಗೆ ಯೋಗ್ಯವಾದ ನಿವಾಸ ಸ್ಥಳವೆಂದು ತಿಳಿಸಿದನು. ಮರುದಿನ ಸಕಾಲದಲ್ಲಿ ಮೂವರೂ ಎದ್ದು, ಋಷಿಗಳ ಹರಕೆಯನ್ನು ಪಡೆದು ಚಿತ್ರಕೂಟಕ್ಕೆ ಪ್ರಯಾಣ ಬೆಳೆಸಿದರು.

ಚಿತ್ರಕೂಟವು ಭರದ್ವಾಜಾಶ್ರಮಕ್ಕೆ ಹತ್ತು ಹರಿದಾರಿಯ ದೂರ. ಹೊರಟವರ ಹಿಂದೆ ಭರದ್ವಾಜನೂ ಕೊಂಚ ದೂರ ಹೋಗಿ, ಸುಗಮವಾದ ದಾರಿಯನ್ನು ಅವರಿಗೆ ತೋರಿಸಿ, ಕಳುಹಿಸಿಕೊಟ್ಟನು. ದಾರಿಯಲ್ಲಿ ಯಮುನಾ ನದಿ ಸಿಕ್ಕಿತು. ಅದನ್ನು ಹಾಯುವಂತಿರಲಿಲ್ಲ. ರಾಮಲಕ್ಷ್ಮಣರು ಅಲ್ಲಲ್ಲಿ ಬಿದಿರು ಕಡ್ಡಿಗಳನ್ನು ಆಯ್ದು, ಒಂದು ತೆಪ್ಪ ಕಟ್ಟಿದರು. ಅದರಲ್ಲಿ ಯಮುನೆ ಯನ್ನು ದಾಟಿ ಮೂವರೂ ದಕ್ಷಿಣ ದಡಕ್ಕೆ ಬಂದರು. ಮುಂದೆ ಕೊಂಚ ನಡೆಯುವ ವೇಳೆಗೆ ಕತ್ತಲಾಯಿತು. ಆ ರಾತ್ರಿ ಅಲ್ಲಿಯೇ ಕಾಡಿನಲ್ಲಿ ಮರದಡಿ ತಂಗಿದ್ದು, ಬೆಳಗಾದ ಕೂಡಲೆ ಮುಂದೆ ಹೊರಟರು.

ಅವರು ಚಿತ್ರಕೂಟಕ್ಕೆ ಬಂದಾಗ ಶಿಶಿರವು ಕಳೆದು ವಸಂತ ಪ್ರಾಪ್ತ ವಾಗಿತ್ತು. ಕೆಂಪಗೆ ಕೆಂಡದಂತೆ ಹೂಬಿಟ್ಟ ಮುತ್ತುಗವೂ, ಹೂದಂಡೆಗಳನ್ನೇ ಹಡೆದಂತೆ ಹೇರಳವಾದ ಹೂಗಿಡಗಳೂ, ಹಣ್ಣು ಕಾಯಿಗಳ ಭಾರಕ್ಕೆ ಬಗ್ಗಿದ ಮರಗಳೂ, ಜೇನಿನ ಭಾರದಿಂದ ಜೋಲುಬಿದ್ದ ಗೂಡುಗಳೂ ಸೀತಾರಾಮ ಲಕ್ಷ್ಮಣರನ್ನು ಅಲ್ಲಿಯೇ ನೆಲೆಸಿರೆಂದು ಕರೆಯುತ್ತಿದ್ದುವು. ಅಲ್ಲಿಯ ಮೃಗ ಪಕ್ಷಿಗಳು, ಸುತ್ತಿನ ನದಿವನಗಳು, ಬಳಿಯ ಉನ್ನತವಾದ ಚಿತ್ರಕೂಟ, ಇವೆಲ್ಲ ವನ್ನು ಕಂಡು ರಾಮನು ಅಲ್ಲಿಯೇ ನೆಲಸಲು ಮನಸ್ಸು ಮಾಡಿದನು. ಬಳಿ ಯಲ್ಲಿಯೇ ವಾಲ್ಮೀಕಿ ಮಹರ್ಷಿಯ ಆಶ್ರಮವಿತ್ತು. ಅವನನ್ನು ಕಂಡು ಅವನ ಸಹವಾಸದ ಮೇಲಂತೂ, ಚಿತ್ರಕೂಟದಲ್ಲಿ ಅವರು ನಿಲ್ಲುವುದೇ ನಿರ್ಧರ ವಾಯಿತು. ಲಕ್ಷ್ಮಣನು ಶೀಘ್ರದಲ್ಲಿ ಒಂದು ಅಂದವಾದ ಪರ್ಣಶಾಲೆಯನ್ನು ಕಟ್ಟಿದನು. ಮೂವರೂ ಅಲ್ಲಿಯೇ ವಾಸಿಸತೊಡಗಿದರು.

ಪ್ರತಿನಿತ್ಯ ತಮ್ಮ ದಿನಕರ್ಮಗಳನ್ನು ಮುಗಿಸಿ ಮೂವರೂ ವಿಹಾರಕ್ಕೆ ಹೋಗುವರು. ಸುತ್ತಿನ ನದಿ ವನ ಸೈಕತ ಪ್ರದೇಶಗಳಲ್ಲೆಲ್ಲ ಸುತ್ತಾಡುವರು. ಪ್ರಕೃತಿಯ ಸೌಂದರ್ಯವನ್ನು ಕಂಡು ನಲಿಯುವರು. ಬೇಟೆಯಾಡುವರು.

ಲಕ್ಷ್ಮಣನಂತೂ ನಿಃಸ್ವಾರ್ಥನಾಗಿ ಸೀತಾರಾಮರ ಸೇವೆಯೇ ತನ್ನ ಜೀವನ ಸರ್ವಸ್ವವೆಂದು ಸದಾ ಅವರ ಸೇವೆಗೆ ಮೈ-ಮನಸುಗಳನ್ನು ಮೀಸಲು ಮಾಡಿದ್ದನು. ರಾಮನು ಸೋದರನ ಸೇವೆಯಿಂದ ಸುಪ್ರೀತನಾಗಿ, ಜಾನಕಿಯ ಮನಸ್ಸನ್ನು ಮೋದಗೊಳಿಸುವ ಕರ್ತವ್ಯವೇ ತನ್ನದೆಂದು ವರ್ತಿಸುತ್ತಿದ್ದನು. ರಾಮ-ಲಕ್ಷ್ಮಣರ ಪ್ರೇಮಾದರಗಳಿಂದ ಸೀತೆಯ ಪಾಲಿಗೆ ಅರಣ್ಯವೇ ಸ್ವರ್ಗವಾಗಿತ್ತು. ದಶರಥನು ಮಾತು ಕೊಟ್ಟಿದ್ದ ಹದಿನಾಲ್ಕು ವರುಷಗಳು ಮುಗಿಯುವ ವರೆಗೂ ತಮಗೆ ಚಿತ್ರಕೂಟವಾಸವೇ ಹೌದೆಂದು ಮೂವರೂ ಎಂದುಕೊಂಡರು.

# ರಾಮ ಭರತ ಸಮಾಗಮ

ರಾಮನು ಕಾಡಿಗೆ ಹೋದುದೆ ಕಾರಣವಾಗಿ ದಶರಥನಿಗೆ ದೇಹ ಸ್ವಾಸ್ಥ್ಯ ತಪ್ಪಿತು. ಮೂರು ಹೊತ್ತೂ ಸೀತಾ-ರಾಮರನ್ನೇ ನೆನೆಯುತ್ತ ಕೊರಗುತ್ತಿದ್ದನು. ಕೈಕೇಯಿಯ ಮುಖ ನೋಡುವುದಕ್ಕೂ ಸಹಿಸಲಸಾಧ್ಯವಾಗಿ, ಕೌಸಲ್ಯೆಯನ್ನಾಶ್ರಯಿಸಿ ತನ್ನ ತಪ್ಪಿತಕ್ಕೆ ತಕ್ಕ ಪ್ರಾಯಶ್ಚಿತ್ತವಾಗಬೇಕೆಂದು ಪ್ರಾರ್ಥಿಸುತ್ತಿದ್ದನು. ಮೂರು ವೇಳೆಯೂ ರಾಮವಿಯೋಗದ ದುಃಖವೇ ಅವನಿಗೆ ಬಲವಾಯಿತು. ಹೀಗೆ ಕೊರಗಿ ಕೊರಗಿ, ರಾಮನು ಕಾಡಿಗೆ ಹೋದ ವಾರದೊಳಗಾಗಿ ದಶರಥನು ಮೃತಿ ಹೊಂದಿದನು.

ದಶರಥನು ಮೃತನಾದನು. ರಾಮ-ಲಕ್ಷ್ಮಣರು ಕಾಡಿಗೆ ಹೋದರು. ಭರತ ಶತ್ರುಘ್ನರು ಸೋದರ ಮಾವನ ಮನೆಯಲ್ಲಿದ್ದರು. ಹೀಗೆ ಅಯೋಧ್ಯೆಯು ಅರಾಜಕವಾದುದನ್ನು ಕಂಡು, ಅದರಿಂದ ಆಗಬಹುದಾದ ಅನಿಷ್ಟಗಳನ್ನು ತಿಳಿದು, ವಸಿಷ್ಠಾದಿ ಹಿರಿಯರು ಭರತನನ್ನು ಕರೆತರುವಂತೆ ದೂತರನ್ನು ಅಟ್ಟಿದರು. ಆದರೆ ರಾಮನ ವನವಾಸವನ್ನಾಗಲಿ, ದಶರಥನ ಮರಣವನ್ನಾಗಲಿ, ಇನ್ನಾವ ಸುದ್ದಿಯನ್ನೇ ಆಗಲಿ ಭರತನಿಗೆ ತಿಳಿಸಕೂಡದೆಂದು ಆಜ್ಞೆಯಾಯಿತು.

ಅತ್ತ ಕೇಕಯನಗರದಲ್ಲಿ ಭರತನು ಕೆಟ್ಟ ಸ್ವಪ್ನಗಳನ್ನು ಕಂಡು ಹೆದರಿದನು. ಅದರಿಂದ ಏನು ಅನಿಷ್ಟವಾದೀತೋ ಎಂದು ತಳಮಳಿಸುತ್ತಿದ್ದನು. ವೇಳೆಗೆ ಸರಿಯಾಗಿ ದೂತರು ಅವನನ್ನು ಅಯೋಧ್ಯೆಗೆ ಕರೆಯಬಂದರು. ಆದರೆ ಆಜ್ಞೆಯ ಮೇರೆ ಅವನಿಗೆ ಅಯೋಧ್ಯೆಯ ಸುದ್ದಿಯೇನನ್ನೂ ಹೇಳವೊಲ್ಲದೆ ಹೋದರು. ಭರತನಿಗೆ ಮನಸ್ಸು ಸ್ತಿಮಿತವಿರಲಿಲ್ಲ. ಮನೆಯವರ ಅನುಮತಿ ಪಡೆದು, ಶತ್ರುಘ್ನನನ್ನೂ ಕರೆದುಕೊಂಡು, ಓಡುವ ರಥ ನಿಲ್ಲಿಸದಂತೆ ಕಂಡೇನೇ ಎಂದು ಅಯೋಧ್ಯೆಗೆ ಬಂದು ಸೇರಿದನು.

ಆಗ ಅವನಿಗೆ ಗೊತ್ತಾಯಿತು—ತನಗೆ ದುಃಸ್ವಪ್ನಗಳು ಏಕಾದುವೆಂದು. ತನ್ನ ತಾಯಿಯು ವಿಚಿತ್ರ ವರಗಳನ್ನು ಕೇಳಿದುದು, ತಂದೆಯು ಧರ್ಮಸಂಕಟಕ್ಕೆ ಕಟ್ಟುಬಿದ್ದುದು, ತಂದೆಯ ಮಾತನ್ನು ಉಳಿಸಲು ರಾಮನೂ ಅವನ ಜೊತೆಯಲ್ಲೇ ಸೀತಾ ಲಕ್ಷ್ಮಣರೂ ವನವಾಸ ಹೋದುದು, ಇವುಗಳ

ಫಲವಾಗಿ ದಶರಥನು ಮರಣ ಹೊಂದಿದುದು, ಎಲ್ಲವನ್ನೂ ಕೇಳಿ ಭರತನು ಕುಗ್ಗಿ ಹೋದನು. ತಂದೆಯ ಸಾವಿಗೂ ಅಣ್ಣ ಅತ್ತಿಗೆಯರ ವನವಾಸಕ್ಕೂ ನೊಂದು ಬೇಕಾದ ಹಾಗೆ ಗೋಳಾಡಿದನು. ಅಳು ನಿಂತು ಕೋಪ ಬಂತು. ಇಷ್ಟೆಲ್ಲ ಅನರ್ಥಕ್ಕೆ ಕಾರಣಳಾದ ಕೈಕೇಯಿಯನ್ನು, ಪುನಃ ಅವಳು ತಲೆಯೆತ್ತದ ರೀತಿ ನಿಂದಿಸಿದನು, ಮೂದಲಿಸಿದನು. ಶತ್ರುಘ್ನನು ಕೂಡ, ಬಂದ ರೋಷದ ಭರದಲ್ಲಿ, ಆ ಅನರ್ಥ ಪರಂಪರೆಗಳಿಗೆಲ್ಲ ಮೂಲ ಮಂತ್ರಿಯಾದ ಮಂಥರೆಯನ್ನು ಮೈಮುರಿಯ ಶಿಕ್ಷಿಸಿದನು.

ಏನು ಮಾಡಿ ಏನು ಬಂತು! ಆದುದೆಲ್ಲವೂ ಮಿಂಚಿ ಹೋಯಿತು. ತಾಯನ್ನು ಮನಸಾರೆ ಅಂದು ಅಂದು, ಭರತನು ಒಂದು ನಿರ್ಧರವನ್ನು ತಾನು ಮನಸ್ಸಿನಲ್ಲಿ ಮಾಡಿದನು. ತಾನು ಕೂಡ ರಾಮನ ಹಾದಿಯನ್ನೇ ಹಿಡಿದು ಹೋಗಿ ಅವನನ್ನು ಕಾಡಿನಿಂದ ಕರೆತಂದು ಪಟ್ಟಾಭಿಷೇಕ ನಡೆಸುವೆನೆಂದನು. ತನಗೆ ಪಟ್ಟಾಭಿಷೇಕ ಬೇಡವೆಂದು ನಿರಾಕರಿಸಿ ತಾಯಿಯ ಮಾತನ್ನು ಮೂಲೆಗೊತ್ತಿದನು. ರಾಮನನ್ನು ಕರೆತರಲು ತತ್‌ಕ್ಷಣವೇ ಹೊರಡುವೆನೆಂದೂ ಆತನನ್ನು ಕರೆದುತಾರದೆ ಇರೆನೆಂದೂ ಕೌಸಲ್ಯೆಗೆ ಅಭಯ ಹೇಳಿದನು.

ಆದರೆ ಆಗಲೇ ಹೊರಡಲಾಗಲಿಲ್ಲ. ಮೃತನಾದ ದಶರಥನಿಗೆ ನಡೆಸಬೇಕಾದ ಕರ್ಮಗಳನ್ನೆಲ್ಲ ನಡೆಸಬೇಕಾಗಿತ್ತು. ಅದನ್ನು ಮುಗಿಸಿಕೊಂಡು ಭರತ ಶತ್ರುಘ್ನರು ಕಾಡಿಗೆ ಹೊರಡಲು ಅನುವಾದರು. ಜೊತೆಯಲ್ಲಿ ಮಂತ್ರಿ ಪುರೋಹಿತರೂ ಅನೇಕ ಜನ ಪೌರರೂ ಹೊರಟರು. ರಾಮನನ್ನು ಹಿಂದಕ್ಕೆ ಕರೆತಂದು ಪಟ್ಟಾಭಿಷೇಕ ಮಾಡಬೇಕೆಂದು ಎಲ್ಲರೂ ಹೊರಟಿದ್ದರಾಗಿ, ಜೊತೆಯಲ್ಲಿ ಒಂದು ಮಹಾ ಸೈನ್ಯವೂ ನಡೆಯಿತು. ಆ ವೇಳೆಗೆ ಕೈಕೇಯಿಗೂ ಬುದ್ಧಿ ಬಂದಿತ್ತು. ತನ್ನ ಅಜ್ಞಾನದಿಂದ ಏನೇನಾಯಿತೆಂಬುದು ಅವಳಿಗೆ ಅರ್ಥವಾಗಿತ್ತು. ಭರತನ ಬೈಗಳಿಂದ ಅವಳು ನೊಂದವಳಲ್ಲ. ತಾನು ಯಾರಿಗೋಸುಗ ಯುವರಾಜ ಪಟ್ಟವನ್ನು ಬೇಡಿ ಎಲ್ಲರಿಗೂ ಅಹಿತಳಾದಳೋ ಆ ಭರತನೇ ಅದನ್ನು ನಿರಾಕರಿಸಿ, ರಾಮನನ್ನು ಕರೆತರಲು ಕಾಡಿಗೆ ಹೊರಟುದು ಕಂಡು ಪಶ್ಚಾತ್ತಪಿಸಿದಳು. ತನ್ನ ಅಕಾರ್ಯಕ್ಕೆ ತಾನೇ ನಾಚಿಕೊಂಡು, ರಾಮನನ್ನು ಹಿಂದೆ ಕರೆಯುವ ಸಮಯದಲ್ಲಿ ತಾನೇ ಎಲ್ಲರಿಗಿಂತ

ಮುಂದಾದಳು. ಮೊದಲೇ ಹೊರಟು ನಿಂತಿದ್ದ ಕೌಸಲ್ಯಾ ಸುಮಿತ್ರೆಯರ ಜೊತೆಯಲ್ಲಿ ತಾನೂ ಹೊರಟಳು. ರಾಮನನ್ನು ಕರೆತರುವ ಸೌಮ್ಯ ಕಾರ್ಯಕ್ಕಾಗಿ ಹೊರಟ ಭರತನ ಸುತ್ತ ಬರುತ್ತಿದ್ದ ಸೇನಾಪರಿವಾರಗಳನ್ನು ನೋಡಿದರೆ, ಯಾವುದೋ ದಿಗ್ವಿಜಯಕ್ಕೆ ಹೊರಟಂತೆ ಕಾಣುತ್ತಿತ್ತು.

ರಾಮನು ಕಾಡಿಗೆ ಹೋದ ದಾರಿಯು ಸುಮಂತ್ರನಿಂದ ಎಲ್ಲರಿಗೂ ತಿಳಿದಿತ್ತು. ಅದರಂತೆಯೇ ಭರತನು ನಡೆದು ಗಂಗಾ ತೀರದ ಶೃಂಗಿಬೇರ ಪುರಕ್ಕೆ ಬಂದನು. ರಾಮನ ಸ್ನೇಹಿತನಾದ ಗುಹನು ಇದ್ದುದು ಅಲ್ಲಿಯೆ. ಭರತನ ಅಪಾರ ಸೈನ್ಯ ಸಮೂಹಗಳನ್ನು ಕಂಡು ರಾಮನ ಹಿತೈಷಿಯಾದ ಗುಹನಿಗೆ ಸಂದೇಹ ಹುಟ್ಟಿತು. ರಾಜ್ಯವನ್ನು ಪಡೆದುದು ಸಾಲದಾಗಿ, ರಾಮನನ್ನು ಕಾಡಿನಲ್ಲಿಯೂ ಇರಗೊಡಿಸದೆ ಕೊಲ್ಲಲೋಸುಗ ಭರತನು ಹೀಗೆ ಬಂದಿರುವನೆಂದುಕೊಂಡನು. ತನ್ನ ಬೇಡ ಪಡೆಯನ್ನೆಲ್ಲ ಕರೆದು ನದೀ ತೀರದಲ್ಲಿ ಕಾವಲು ನಿಲ್ಲಿಸಿ, ಯಾರನ್ನೂ ನದಿ ದಾಟಲು ಬಿಡಕೂಡದೆಂದು ಆಜ್ಞೆ ಮಾಡಿದನು. ಹಾಗೆಯೇ, ಅವನಿಗೆ ರಾಮ ಭರತರ ಹಿಂದಿನ ಪರಸ್ಪರ ಪ್ರೇಮ ಜ್ಞಾಪಕ ಬಂತು. ತನ್ನ ಸಂದೇಹಗಳಿಗೆ ತಾನೇ ನಾಚಿದನು. ಲೋಕ ಮರ್ಯಾದೆಯನ್ನನುಸರಿಸಿ ಬಂದವರನ್ನೆಲ್ಲ ಕಂಡು ಸತ್ಕರಿಸಿದನು. ಭರತನನ್ನು ಕಂಡು ಮಾತನಾಡಿದ ಕ್ಷಣವೇ ಗುಹನ ಸಂದೇಹಗಳೆಲ್ಲವೂ ಮಾಯವಾದುವು. ಅವನು ಭರತನನ್ನು ಕರೆದುಕೊಂಡು ಹೋಗಿ ರಾಮನು ನಿಂತು ಕೂತು ಮಲಗಿದ ಸ್ಥಳಗಳೆಲ್ಲವನ್ನೂ ಒಂದೊಂದಾಗಿ ತೋರಿಸಿದನು. ಭರತನಿಗೆ ರಾಮನಲ್ಲಿದ್ದ ಅಗಾಧವಾದ ಪ್ರೇಮವನ್ನೂ, ಅವನ ಕಷ್ಟಕ್ಕೆ ಇವನ ಹಿಡಿಸಲಾರದ ದುಃಖವನ್ನೂ ಕಂಡು, ಗುಹನಿಗೆ ಆಶ್ಚರ್ಯವಾಯಿತು. ಭರತನ ಜೊತೆಯಲ್ಲಿ ತಾನೂ ರಾಮದರ್ಶನಕ್ಕೆ ಬರುವುದಾಗಿ ತಿಳಿಸಿದನು.

ಮಾರನೆಯ ದಿನ ಬೆಳಗ್ಗೆ ಎಲ್ಲರೂ ಗಂಗಾನದಿಯನ್ನು ದಾಟಿ, ತಮ್ಮ ಪ್ರಯಾಣವನ್ನು ಮುಂದುವರಿಸಿದರು. ಮುಂದೆ ಭರದ್ವಾಜಾಶ್ರಮವು ಸಿಕ್ಕಿತು. ಭರತನು ತನ್ನ ಪರಿವಾರ ಸೈನ್ಯಗಳನ್ನೆಲ್ಲ ಒಂದು ಹರಿದಾರಿಯ ದೂರದಲ್ಲಿಯೇ ಬಿಟ್ಟು, ತನ್ನ ಕ್ಷತ್ರಿಯ ವೇಷವನ್ನು ಕಳೆದು, ನಾರುಮಡಿಯನ್ನು ಧರಿಸಿದನು. ಹೀಗೆ ತಾಪಸವೇಷದಲ್ಲಿ ಹೊರಟ ಭರತನ ಜೊತೆಯಲ್ಲಿ ಮಂತ್ರಿಗಳೂ ವಸಿಷ್ಠನೂ ಹೊರಟರು. ಭರತನನ್ನು ಕಂಡು, ಗುಹನಿಗೆ ಆದ

ಸಂದೇಹವೇ ಭರದ್ವಾಜನಿಗೂ ಆಯಿತು. ವಸಿಷ್ಠನಿಗೆ ಅರ್ಘ್ಯ ಪಾದ್ಯಾದಿಗಳನ್ನು ಕೊಟ್ಟು ಅತಿಥಿಗಳನ್ನು ಸತ್ಕರಿಸಿದ ಮೇಲೆ, ಭರದ್ವಾಜನು ತನಗಾದ ಸಂದೇಹವನ್ನು ಬಾಯಿ ಬಿಟ್ಟು ಹೇಳಿದನು. ಆ ಮಾತು ಭರತನಿಗೆ ಶೂಲವಾಯಿತು. ತನಗೆ ರಾಜ್ಯಲೋಭ ಮಾತ್ರವಲ್ಲದೆ ಸೋದರ ಮಾತ್ಸರ್ಯವೂ ಉಂಟೆಂದು ಲೋಕವು ಅಭಿಪ್ರಾಯ ಪಟ್ಟುದಕ್ಕಾಗಿ, ಭರತನು ತನ್ನ ಬಾಳನ್ನು ಹಳಿದುಕೊಂಡನು. ಭರತನ ಸದುದ್ದೇಶವನ್ನು ತಿಳಿದು, ಭರದ್ವಾಜನಿಗೆ ಆನಂದವಾಯಿತು. ತಾನು ಮೊದಲು ಮಾಡಿದ ಗಾಯಕ್ಕೆ ತಕ್ಕ ಉಪಶಾಂತಿ ಮಾಡಿ ಭರತನನ್ನು ಸಂತೈಸಿದನು. ತನ್ನ ತಪಶ್ಶಕ್ತಿಯಿಂದ ಬೇಕುಬೇಕಾದ ಭೋಜನ ಸಾಮಗ್ರಿಗಳನ್ನು ನಿರ್ಮಿಸಿ, ಭರತನ ಪರಿವಾರಕ್ಕೆಲ್ಲ ತಣಿಯುಣಿಸಿ, ತೃಪ್ತಿಗೊಳಿಸಿದನು.

ರಾತ್ರಿ ಭರದ್ವಾಜಾಶ್ರಮದಲ್ಲಿ ತಂಗಿ ತಣಿದ ಅವರೆಲ್ಲರೂ ಬೆಳಗ್ಗೆ ಪುನಃ ಪ್ರಯಾಣಕ್ಕೆ ಆತುರರಾದರು. ಭರದ್ವಾಜನು ಎಲ್ಲರನ್ನೂ ಯಥೋಚಿತವಾಗಿ ಹರಸಿ, ಚಿತ್ರಕೂಟವನದ ಮಾರ್ಗವನ್ನು ತೋರಿಸಿ ಅವರನ್ನು ಬೀಳ್ಕೊಂಡನು. ಅವನು ಹೇಳಿದ ದಾರಿಯನ್ನೆ ಹಿಡಿದು ಭರತಾದಿಗಳು ಮುಂದೆ ನಡೆದು ಚಿತ್ರಕೂಟಕ್ಕೆ ಬಂದರು. ಬಂದವರು ರಾಮಾಶ್ರಮವನ್ನು ಹುಡುಕಲುದ್ಯುಕ್ತರಾದರು. ಆ ವೇಳೆಗೆ ದೂರದಲ್ಲಿ ಹೊಗೆಯೇಳುತ್ತಿರುವುದು ಕಂಡಿತು. ಭರತನು ತನ್ನ ಸೇನೆಯೆಲ್ಲವನ್ನೂ ಅಲ್ಲಿಯೇ ಇರಹೇಳಿ, ವಸಿಷ್ಠರೊಡನೆಯೂ ಮಂತ್ರಿಗಳೊಡನೆಯೂ ಮುಂದೆ ಹೊರಟನು. ಮಿಕ್ಕವರೆಲ್ಲರೂ ರಾಮನನ್ನು ಎಂದು ಕಂಡೇವೊ ಎಂದು ಕಾಯುತ್ತ ಅಲ್ಲಿಯೇ ಕುಳಿತರು.

ಆ ಸಮಯದಲ್ಲಿ ಸೀತಾರಾಮರು ತಮ್ಮ ಪರ್ಣಶಾಲೆಯ ಮುಂದೆ ಕುಳಿತಿದ್ದರು. ತಾನು ಬೇಟೆಯಾಡಿ ತಂದ ಮಾಂಸವನ್ನು ಸೀತೆಗೆ ತಿನ್ನಿಸುತ್ತ, ರಾಮನು ಮಂದಾಕಿನೀ ನದಿಯ ಅಂದವನ್ನು ವರ್ಣಿಸಿ ಅವಳನ್ನು ಸಂತೋಷಗೊಳಿಸುತ್ತಿದ್ದನು. ಎಂದಿನಂತೆ ಲಕ್ಷ್ಮಣನು ಅವರ ಪರಿಚರ್ಯೆಗೆ ಸಿದ್ಧನಾಗಿ ನಿಂತಿದ್ದನು. ಹೀಗಿರಲು ಆಶ್ರಮದ ಸುತ್ತುಮುತ್ತಿನ ಮೃಗ ಪಕ್ಷಿಗಳೆಲ್ಲವೂ ಇದ್ದಕ್ಕಿದ್ದಂತೆ ಬೆದರಿ ಚೆಲ್ಲಾಪಿಲ್ಲಿಯಾಗಿ ಓಡುವುದನ್ನು ರಾಮನು ಕಂಡನು. ಭರತನ ಸೇನೆ ಬಂದುದಕ್ಕೆ ಬೆದರಿದ ಪ್ರಾಣಿಗಳವು. ಆದರೆ ರಾಮಲಕ್ಷ್ಮಣರಿಗೆ ಆ ಕಾರಣವು ತಿಳಿಯದು. ಕಾರಣವನ್ನು ತಿಳಿಯುವುದಕ್ಕೋಸ್ಕರ ರಾಮನ

ಆಜ್ಞೆಯಂತೆ ಲಕ್ಷ್ಮಣನು ಬಳಿಯ ಮರವನ್ನೇರಿ ಸುತ್ತಲೂ ನೋಡಿದನು. ದೂರದಲ್ಲಿ ಭರತನೂ ಅವನ ಸೈನ್ಯವೂ ಕಣ್ಣಿಗೆ ಬಿತ್ತು. ಲಕ್ಷ್ಮಣನ ಸೈರಣೆ ಹೋಯ್ತು.

ಲಕ್ಷ್ಮಣನಿಗೆ ರಾಮನೆಂದರೆ ಪ್ರಾಣ. ರಾಮನಿಗೆ ಪಟ್ಟಾಭಿಷೇಕವು ತಪ್ಪಿ ಅರಣ್ಯವಾಸವು ಗೊತ್ತಾದಾಗಲೆ ಅವನ ಶೋಕ, ರೋಷ ಹೇಳತೀರದು. ವರ ಕೇಳಿದ ಕೈಕೇಯಿಯನ್ನು, ವರ ಕೊಟ್ಟ ದಶರಥನನ್ನು, ತಂದೆ ತಾಯಿಗಳನ್ನೇ ಎದುರಿಸುವೆನೆಂದು ಎದ್ದಿದ್ದವನು, ಅಣ್ಣನ ಮಾತಿಗಾಗಿ ತನ್ನ ಕೋಪವನ್ನು ನುಂಗಿಕೊಳ್ಳಬೇಕಾಯಿತು. ಈಗ ಭರತನು ಸೇನಾಸಮೇತನಾಗಿ ಬಂದುದು ನೋಡಿ ಮತ್ತೆ ಆ ಕೋಪ ಮರುಕೊಳಿಸಿ ಮೇರೆ ಮೀರಿತು. ಗುಹ ಭರದ್ವಾಜರಿಗೆ ಬಂದ ಸಂದೇಹವು ಅವನಿಗೂ ಬಂದಿತು. ಆದರೆ ಅವರಂತೆ ತಡೆದು ವಿಚಾರಿಸುವ ಮುನ್ನವೇ ಎಲ್ಲರನ್ನೂ ಧ್ವಂಸಮಾಡಿ ಬಿಡುವೆನೆಂದು ಬಿಲ್ಲು ಬಾಣ ಹಿಡಿದನು.

ಲಕ್ಷ್ಮಣನು ತಾನು ತನ್ನನ್ನು ತಡೆದುಕೊಳ್ಳಲಾರನಾದರೂ, ಅವನಿಗೆ ಸರಿಯಾದ ತಡೆಯು ರಾಮನು. ರಾಮನಿಗೆ ಲಕ್ಷ್ಮಣನ ಪ್ರೀತಿಯ ಆಳ ಗೊತ್ತು. ಲಕ್ಷ್ಮಣನ ಕಾರ್ಯ ಕತೆಗಳಿಗೆಲ್ಲ ಆ ಪ್ರೀತಿಯೇ ಕಾರಣವೆಂದೂ ಅವನಿಗೆ ಗೊತ್ತು. ಲಕ್ಷ್ಮಣನನ್ನು ಪ್ರೀತಿಯಿಂದ ಬಳಿಗೆ ಕರೆದು ಕುಳ್ಳಿರಿಸಿಕೊಂಡು, ಭರತನ ಗುಣಗಾನ ಮಾಡಿ, ನಯವಾದ ಮಾತುಗಳಿಂದ ಅವನ ಅನ್ಯಾಯವಾದ ಸಂದೇಹಗಳನ್ನು ಕಳೆಯುತ್ತಿದ್ದನು.

ಹೀಗೆ ರಾಮನು ಲಕ್ಷ್ಮಣನ ಕೋಪವನ್ನು ಶಮನಮಾಡುವ ವೇಳೆಗೆ ಭರತನು ತನ್ನ ತಾಪಸ ವೇಷದಲ್ಲಿ ಬಂದನು. ಹಿಂದೆ ತಾನು ಅರಮನೆಯಲ್ಲಿ ಕಂಡವರನ್ನು ಇಂದು ಸಾಮಾನ್ಯರಂತೆ ಪರ್ಣಶಾಲೆಯಲ್ಲಿ ಕಂಡು, ಭರತನಿಗೆ ದುಃಖ ಉಕ್ಕಿಬಂತು. ಮಾತನಾಡಲಾರದೆ ಬಂದು ರಾಮನ ಕಾಲಿಗೆ ಬಿದ್ದನು. ರಾಮನು ಅವನನ್ನು ಪ್ರೀತಿಯಿಂದ ಹಿಡಿದೆತ್ತಿ ಆದರಿಸಿದನು. ಅಯೋಧ್ಯೆಯಿಂದ ಬಂದ ಗುರು ಹಿರಿಯರನ್ನೆಲ್ಲ ವಿಚಾರಿಸಿ, ರಾಮ ಲಕ್ಷ್ಮಣರು ತಮ್ಮ ಮೂವರು ತಾಯಂದಿರಿಗೂ ನಮಸ್ಕರಿಸಿದರು. ದಶರಥನ ಮರಣವಾರ್ತೆ ತಿಳಿಯಿತು. ಸೀತಾ ರಾಮ ಲಕ್ಷ್ಮಣರು ಹಿಂದಿನವರನ್ನೆಲ್ಲ ನೆನಸಿಕೊಂಡು ಹಲುಬಿದರು. ಹಲುಬಿ ಗೋಳಾಡಿದ ಮೇಲೆ ಸೋದರರಿಬ್ಬರೂ ಮಂದಾಕಿನೀ

ನದಿಯಲ್ಲಿ ತಂದೆಗೆ ತರ್ಪಣಕೊಟ್ಟು ಆಶ್ರಮಕ್ಕೆ ಹಿಂದಿರುಗಿದರು. ಅಲ್ಲಿ ನೆರೆದವರ ಯಾರ ಮುಖದಲ್ಲಿಯೂ ಗೆಲುವಿಲ್ಲ. ಎಲ್ಲರೂ ಅಯೋಧ್ಯೆಗೆ ಬಂದ ಪರಿಸ್ಥಿತಿಯನ್ನು ನೆನೆದು ಗೋಳಾಡುವವರೆ.

ಎಲ್ಲರ ದುಃಖವೂ ಕೊಂಚ ಶಮನವಾಗುತ್ತಿರುವಾಗ ಭರತನು ತಾನು ಬಂದ ಕಾರ್ಯವನ್ನು ನೆನೆದನು. ಅಯೋಧ್ಯೆಗೆ ಮರಳಿ ಬರಬೇಕೆಂದು ರಾಮನನ್ನು ಪ್ರಾರ್ಥಿಸಿದನು. ಆದರೆ ರಾಮನು ಅದನ್ನು ಒಪ್ಪುವಂತಿರಲಿಲ್ಲ. ಅವನು ತಂದೆಯ ಮಾತನ್ನು ನಡೆಸಿಕೊಡಬೇಕು. ಅದರಂತೆ ಭರತನು ರಾಜ್ಯವಾಳಬೇಕು, ರಾಮನು ಹದಿನಾಲ್ಕು ವರ್ಷ ವನವಾಸ ಮಾಡಬೇಕು. ಭರತನ ನಿರ್ಬಂಧಗಳೆಲ್ಲ ರಾಮನ ಸಮಾಧಾನಗಳಿಗೆ ಬಗ್ಗಬೇಕಾಯಿತು. ಕೈಕೇಯಿ ಕೌಸಲ್ಯೆ ಮೊದಲಾದವರ ಪ್ರಾರ್ಥನೆಗಳಿಗೆ ಕೂಡ ರಾಮನದು ಒಂದೇ ಉತ್ತರ—ತಾನು ತಂದೆಯ ಮಾತನ್ನು ಪಾಲಿಸಬೇಕೆಂಬುದು. ಯಾರ ಬಲವಂತಕ್ಕೂ ರಾಮನು ಒಪ್ಪದುದು ನೋಡಿ ವಸಿಷ್ಠನು ತಾನೇ ಹೇಳಿದನು. ಜ್ಯೇಷ್ಠನೇ ರಾಜ್ಯಾರ್ಹನೆಂದು ತಿಳಿಸಲು ಮನುವಂಶದ ಅರಸರ ಪೂರ್ವಾಚಾರವನ್ನೆಲ್ಲ ನಿದರ್ಶಿಸಿದನು. ಆಚಾರ್ಯನಾದ ತನ್ನ ಮಾತನ್ನು ರಾಮನು ನಡೆಸಬೇಕೆಂದೂ ನುಡಿದನು. ಅದಕ್ಕೆ ಪ್ರತಿಯಾಗಿ, ಆಚಾರ್ಯವಚನಕ್ಕಿಂತ ಪಿತೃವಾಕ್ಯವೇ ಹೆಚ್ಚೆಂದು ರಾಮನು ನುಡಿದುದಕ್ಕೆ ವಸಿಷ್ಠನು ಏನೂ ಹೇಳಲಾರದೆ ಹೋದನು. ರಾಮನು ಹೇಗಾದರೂ ಹಿಂಧಿರುಗುವುದಿಲ್ಲವೆಂದು ತಿಳಿದು ಎಲ್ಲರೂ ದುಃಖಪಟ್ಟರು.

ಭರತನಿಗೆ ಏನು ಮಾಡಬೇಕೆಂಬುದು ತಿಳಿಯಲಿಲ್ಲ. ತನಗೆ ರಾಜ್ಯವಾಳುವುದು ಬೇಕಿಲ್ಲ, ಅದು ರಾಮನಿಗೆ ಸೇರಿದುದು. ಆದರೆ ರಾಮನು ಕಾಡಿನಿಂದ ಬರುವ ಹಾಗಿಲ್ಲ. ಅಲ್ಲಿಯ ವರೆಗೆ ಹದಿನಾಲ್ಕು ವರುಷಗಳು ರಾಜ್ಯದ ಗತಿಯೇನು? ಭರತನಿಗೊಂದು ಯೋಚನೆ ಹೊಳೆಯಿತು. ರಾಮನಿಗೆ ಪ್ರತಿನಿಧಿಯಾಗಿ ಅವನ ಪಾದುಕೆಗಳು ಅಯೋಧ್ಯೆಯಲ್ಲಿರಲಿ. ಅವುಗಳ ಹೆಸರಿನಲ್ಲಿ, ರಾಮನು ಹಿಂದಿರುಗಿ ಬರುವ ವರೆಗೆ ತಾನು ರಾಜ್ಯಪರಿಪಾಲನೆ ಮಾಡಿದರಾಯಿತು. ಅದಕ್ಕೇನೂ ರಾಮನು ಆಕ್ಷೇಪಣೆ ತರಲಾಗಲಿಲ್ಲ. ಭರತನ ಪ್ರೇಮಕ್ಕೆ ಪುಲಕಿತನಾಗಿ, ತಮ್ಮನಿಗೆ ತನ್ನ ಪಾದುಕೆಗಳನ್ನು ಅನುಗ್ರಹಿಸಿದನು. ಭರತನು ಅವುಗಳನ್ನು ಭಕ್ತಿಯಿಂದ ಪ್ರತಿಗ್ರಹಿಸಿ, ಸೀತಾ ರಾಮ ಲಕ್ಷ್ಮಣರ

ಅನುಮತಿ ಪಡೆದು ಅಯೋಧ್ಯೆಗೆ ಹಿಂದಿರುಗಿದನು. ಬಂದವರೆಲ್ಲರೂ ಬಂದಂತೆ ಅಯೋಧ್ಯೆಗೆ ಹೋದರು. ಸೀತಾ ರಾಮ ಲಕ್ಷ್ಮಣರು ಮೂವರು ಚಿತ್ರಕೂಟ ದಲ್ಲಿಯೇ ನಿಂತರು.

ಭರತನು ಪಾದುಕೆಗಳನ್ನು ಅಯೋಧ್ಯೆಗೆ ತಂದನು. ಆದರೆ ದಶರಥ ನಿಲ್ಲದೆ, ಸೀತಾ ರಾಮ ಲಕ್ಷ್ಮಣರಿಲ್ಲದೆ, ಅಯೋಧ್ಯೆಯು ಪಿಚ್ಚೆನುತ್ತಿತ್ತು. ಭರತನು ಅಲ್ಲಿ ನಿಲ್ಲಲಾರದೆ ಹತ್ತಿರದಲ್ಲಿದ್ದ ನಂದಿಗ್ರಾಮದಲ್ಲಿ ರಾಮಪಾದುಕೆ ಗಳನ್ನು ಪ್ರತಿಷ್ಠಿಸಿದನು. ಅವುಗಳ ಪರವಾಗಿ ರಾಜ್ಯ ಪರಿಪಾಲನೆ ಮಾಡುತ್ತ, ತನ್ನ ಜಟೆ ವಲ್ಕಲಗಳ ತಾಪಸ ವೇಷವನ್ನು ಬಿಡದೆ, ರಾಮನು ವನವಾಸ ಮುಗಿಸಿ ಹಿಂದಿರುಗುವ ಗಡುವಾದ ಹದಿನಾಲ್ಕು ವರ್ಷಗಳನ್ನೇ ನೆನೆದು, ದಿನ ಎಣಿಸುತ್ತಿದ್ದನು.

---

# ಶೂರ್ಪನಖಾ ಪ್ರಕರಣ

ಭರತನು ಅಯೋಧ್ಯೆಗೆ ಹಿಂದಿರುಗಿದ ಮೇಲೆ ಸೀತಾರಾಮಲಕ್ಷ್ಮಣರು ಚಿತ್ರಕೂಟವಲ್ಲಿಯೇ ವಾಸಿಸುತ್ತಿದ್ದರು. ಕೆಲದಿನಗಳಲ್ಲಿ ಅಲ್ಲಿಯ ಋಷಿಗಳಿಗೆ ಮನಸ್ಸು ನೆಮ್ಮದಿಯಿಲ್ಲದಿರುವುದು ಕಂಡುಬಂದಿತು ಅವರ ಆಶ್ರಮದ ಸುತ್ತ ರಾಕ್ಷಸರ ಹಾವಳಿ ಹೆಚ್ಚಾಗಿತ್ತು. ಲಂಕಾಧಿಪತಿಯಾದ ರಾವಣನ ತಮ್ಮ ಖರನೆಂಬ ರಾಕ್ಷಸನು ತನ್ನ ತೋಳ್ಬಲಕ್ಕೆ ಯಾರೂ ಇದಿರಿಲ್ಲವೆಂದು ಕೊಬ್ಬಿ ಎಲ್ಲರನ್ನೂ ಪೀಡಿಸುತ್ತಿದ್ದನು. ಅವನ ಅನುಚರರು ಕೂಡ ಅವಿನಯ ದಿಂದ ಎಲ್ಲೆಡೆಗೂ ನುಗ್ಗಿ ತಪಸ್ವಿಗಳಿಗೆ ಬಹಳ ಕಿರುಕುಳ ಕೊಡುತ್ತಿದ್ದರು. ಅವರ ಬಾಧೆಯನ್ನು ತಡೆಯಲಾರದೆ ಚಿತ್ರಕೂಟದ ಋಷಿಗಳು ಬೇರೆ ತಪೋ ವನಕ್ಕೆ ಹೋಗಲು ಸಿದ್ಧರಾದರು. ರಾಕ್ಷಸ ಬಾಧೆಯನ್ನು ತಾನು ತಪ್ಪಿಸುವೆ ನೆಂದು ರಾಮನು ಕೊಟ್ಟ ಅಭಯದಿಂದಲೂ ಅವರ ಭಯ ಇಂಗಲಿಲ್ಲ. ರಾಮನಿಗೂ ತಮ್ಮೊಡನೆ ಬಾರೆಂದು ಉಪದೇಶಿಸಿದರು. ರಾಮನು ಬರು ವುದಿಲ್ಲವೆಂದು ತಿಳಿದ ಮೇಲೆ ತಾವು ಹೊರಟುಹೋದರು.

ಅವರು ಹೋದ ಸ್ವಲ್ಪ ದಿವಸಗಳಲ್ಲಿಯೇ ರಾಮನಿಗೆ ಚಿತ್ರಕೂಟವು ಜುಗುಪ್ಸೆಯಾಯಿತು. ಮೊದಲಿನ ಸಹವಾಸಿಗಳೆಲ್ಲರೂ ಬಿಟ್ಟುಹೋದ ಸ್ಥಳ ದಲ್ಲಿ ಮೂವರೇ ನಿಲ್ಲಲು ಮನಸ್ಸು ಬರಲಿಲ್ಲ. ಅಲ್ಲದೆ, ಬಂದು ಹೋದ ಭರತ ಕೌಸಲ್ಯಾದಿಗಳ ನೆನಪು ಆಗಾಗ್ಗೆ ಬಂದು ಬಾಧಿಸುತ್ತಿತ್ತು. ಅದರಿಂದ ಚಿತ್ರ ಕೂಟವನ್ನು ಬಿಟ್ಟು ದಂಡಕಾರಣ್ಯಕ್ಕೆ ಹೋಗುವುದೆಂದು ಗೊತ್ತಾಯಿತು. ಅಲ್ಲಿಯ ಜನಸ್ಥಾನದಲ್ಲಿಯೆ ಖರನು ಇದ್ದುದು. ಆದರೆ ರಾಮಲಕ್ಷ್ಮಣರಿಗೆ ರಾಕ್ಷಸರ ಭೀತಿಯಿರಲಿಲ್ಲ.

ದಂಡಕಾರಣ್ಯಕ್ಕೆ ಹೊರಟವರಿಗೆ ದಾರಿಯಲ್ಲಿ ಅತ್ರಿ ಮಹಾಮುನಿಯ ಆಶ್ರಮ ಸಿಕ್ಕಿತು. ಅತ್ರಿಯೂ ಅವನ ಪತ್ನಿಯಾದ ಅನಸೂಯೆಯೂ ಅತಿಥಿ ಗಳನ್ನು ಆದರದಿಂದ ಕರೆದು ಉಪಚರಿಸಿದರು ಮೂವರೂ ಅವರ ಆತಿಥ್ಯ ವನ್ನು ಸ್ವೀಕರಿಸಿ ರಾತ್ರಿ ಅಲ್ಲಿಯೇ ನಿಂತರು. ಅನಸೂಯೆಯು ಸೀತೆಗೆ ಪಾತಿವ್ರತ್ಯ ಧರ್ಮವನ್ನು ಉಪದೇಶಿಸಿದಳು. ರಾತ್ರಿ ಕಳೆದು ಬೆಳಗಾಗಲು ಮೂವರೂ ಮುಂದೆ ಪ್ರಯಾಣ ಬೆಳೆಸಿದರು. ದಾರಿಯಲ್ಲಿ ಇನ್ನೂ ಹಲವು

ಖುಷ್ಯಾಶ್ರಮಗಳು ಸಿಕ್ಕಿದುವು. ಅಲ್ಲಿಯವರು ಕೂಡ ರಾಕ್ಷಸರ ಹಾವಳಿಗೆ ಸಿಕ್ಕಿ ತತ್ತರಿಸುತ್ತಿದ್ದುದನ್ನು ರಾಮನು ಕಂಡನು. ಸಜ್ಜನರು ಹಾಗೆ ತೊಂದರೆ ಗೀಡಾದುದನ್ನು ಕಂಡು, ರಾಕ್ಷಸರನ್ನು ಧ್ವಂಸ ಮಾಡುವುದೇ ನಿಶ್ಚಯವೆಂದು ಕೊಂಡನು. ತನ್ನ ನಿಶ್ಚಯವನ್ನು ಆ ಮುನಿಗಳಿಗೆ ತಿಳಿಸಿ, ಅವರ ಭಯವನ್ನು ಕಡಿಮೆಮಾಡಿ, ದಂಡಕಾರಣ್ಯಕ್ಕೆ ನಡೆದನು. ಮೂವರೂ ದಂಡಕಾರಣ್ಯವನ್ನು ಮುಟ್ಟಿದರು ಅಲ್ಲಿಯ ಒಂದು ಪರ್ಣಶಾಲೆಯಲ್ಲಿ ಆ ಹೊತ್ತು ತಂಗಿದರು.

ಮರುದಿನ ಮುಂದೆ ನಡೆದಾಗ, ವಿರಾಧನೆಂಬ ರಾಕ್ಷಸನು ಎದುರಿಗೆ ಸಿಕ್ಕಿದನು. ಅವನಿಗೂ ಯಾವ ಆಯುಧದಿಂದಲೂ ಸಾವಾಗದಂತೆ ಬ್ರಹ್ಮನ ವರವಿತ್ತು. ಅವನು ಎದುರಿಗೆ ಬಂದ ರಾಮಲಕ್ಷ್ಮಣರನ್ನು ಎದುರಿಸಿದನು. ಅವರ ಬಾಣಗಳ ಮಳೆಗೂ ಹೆದರದೆ, ಇಬ್ಬರನ್ನು ಅನಾಯಾಸವಾಗಿ ಹೆಗಲ ಮೇಲೆ ಎತ್ತಿ ಕೂರಿಸಿಕೊಂಡು ಓಡಿದನು. ರಾಮಲಕ್ಷ್ಮಣರಿಗೆ ಅದು ಆಟ ವಾಗಿತ್ತು. ದಾರಿಗಾಣದ ಕಾಡಿನಲ್ಲಿ ಈ ನೆಪದಿಂದಲಾದರೂ ವಿರಾಧನು ದಾರಿ ತೋರಿಸಲಿ ಎಂದುಕೊಂಡರು. ಆದರೆ ಸೀತೆಯ ಭಯವನ್ನು ನೋಡಿ ತಾಳಲಾರದೆ, ಆ ರಾಕ್ಷಸನನ್ನು ಕೊಲ್ಲಬೇಕೆಂದು ಅವನ ಎರಡೂ ಕೈಗಳನ್ನು ಕಡಿದರು. ಅವನನ್ನು ಕೆಳಗೆ ಉರುಳಿಸಿ, ಗುದ್ದಿಗುದ್ದಿ ಅರ್ಧ ಜೀವ ಮಾಡಿದರು. ಆದರೂ ಅವನು ಸಾಯಲಿಲ್ಲ. ಕಡೆಗೆ ಹಳ್ಳ ತೆಗೆದು ಅವನನ್ನು ಹೂತರು. ವಿರಾಧನು ಸತ್ತುಹೋದನು. ಸೀತಾ ರಾಮ ಲಕ್ಷ್ಮಣರು ಮುಂದುವರಿದರು.

ಮುಂದೆ ಅವರಿಗೆ ಶರಭಂಗ ಮಹಾಮುನಿಯ ಆಶ್ರಮವು ಸಿಕ್ಕಿತು. ಶರಭಂಗನು ಅನೇಕ ವರುಷಗಳು ತಪಸ್ಸುಮಾಡಿ ಬ್ರಹ್ಮಲೋಕಪದವಿ ಸಂಪಾ ದಿಸಿದ್ದನು. ಅವನನ್ನು ಬ್ರಹ್ಮಲೋಕಕ್ಕೆ ಕರೆದೊಯ್ಯಲು ವಿಮಾನವೂ ಆಗಲೇ ಬಂದಿತ್ತು. ಆದರೆ ರಾಮನು ಬಂದುದನ್ನು ಕಂಡು, ಶರಭಂಗನು ತನ್ನ ಪ್ರಯಾಣವನ್ನು ತಡೆದು ನಿಂತನು. ಪರಸ್ಪರ ಉಪಚಾರವಾದ ಮೇಲೆ, ತನಗೆ ತಕ್ಕ ವಾಸಸ್ಥಾನವನ್ನು ತಿಳಿಸಬೇಕೆಂದು ರಾಮನು ಆ ಮುನಿಯನ್ನು ಬೇಡಿ ದನು. ಶರಭಂಗನು ರಾಮನನ್ನು ಸುತೀಕ್ಷ್ಣನೆಂಬ ಋಷಿಯ ಬಳಿ ಹೋ ಗೆಂದು, ಆ ಆಶ್ರಮದ ದಾರಿಯನ್ನು ಸ್ಪಷ್ಟವಾಗಿ ತಿಳಿಸಿದನು. ಬಂದು ನಿಂತ ವಿಮಾನವು ಶರಭಂಗನನ್ನು ಬ್ರಹ್ಮಲೋಕಕ್ಕೆ ಒಯ್ದಿತು.

ಸುತೀಕ್ಷ್ಣಾಶ್ರಮಕ್ಕೆ ಹೊರಟು ನಿಂತ ಕಾಲದಲ್ಲಿ, ಶರಭಂಗಾಶ್ರಮದ ಋಷಿಗಳೆಲ್ಲರೂ ರಾಮನ ಬಳಿ ಬಂದು ಮೊರೆಯಿಟ್ಟರು. ರಾಮನು ಅವರಿಗೂ ಅಭಯ ಕೊಟ್ಟು ನಡೆದನು. ರಾಮನು ಸುತೀಕ್ಷ್ಣನನ್ನು ಕಂಡುದು ಮಾತ್ರ ವಲ್ಲದೆ, ಅವನಿಗೆ ಮೃಗಗಳು ಕೊಡುತಿದ್ದ ತೊಂದರೆಯನ್ನು ತಪ್ಪಿಸಿದನು. ಅದೇ ಕಾಲದಲ್ಲಿ ಅವರು ಅಲ್ಲಿನ ಸುತ್ತುಮುತ್ತಲಿನ ತಪೋವನ ಕ್ಷೇತ್ರಗಳನ್ನೆಲ್ಲ ಸಂದರ್ಶಿಸಿ ಬಂದರು. ಆ ಸಂಚಾರ ಸಮಯದಲ್ಲಿ ಅಗಸ್ತ್ಯಾಶ್ರಮವು ದಾರಿ ಯಲ್ಲಿ ಸಿಕ್ಕಿತು. ಅಗಸ್ತ್ಯನು ಸೀತಾ ರಾಮ ಲಕ್ಷ್ಮಣರನ್ನು ಯಥೋಚಿತ ವಾಗಿ ಸತ್ಕರಿಸಿ, ತನ್ನಲ್ಲಿ ಇದ್ದ ವೈಷ್ಣವ ಧನುಸ್ಸನ್ನೂ ಬಾಣ ಬತ್ತಲಿಕೆಗಳನ್ನೂ ರಾಮನಿಗೆ ಅನುಗ್ರಹಿಸಿದನು. ರಾಮನು ಅವುಗಳನ್ನು ಭಕ್ತಿಯಿಂದ ಸ್ವೀಕರಿಸಿ, ಅಗಸ್ತ್ಯರ ಅನುಮತಿ ಪಡೆದು, ಖರಾದಿ ರಾಕ್ಷಸರನ್ನು ನಾಶಮಾಡಲು ಪಂಚ ವಟಿಗೆ ನಡೆದನು.

ಪಂಚವಟಿಗೆ ಹೋಗುತ್ತಿದ್ದವರು, ದಾರಿಯ ಆಲದ ಮರದ ಮೇಲೆ ಒಂದು ದೊಡ್ಡ ಹದ್ದು ಕುಳಿತಿದ್ದುದನ್ನು ಕಂಡರು. ಅದೂ ಒಂದು ರಾಕ್ಷಸ ನಾಗಿರಬಹುದೆಂದು ಅವರಿಗೆ ತೋರಿತು. ಆದರೆ ಆ ಹದ್ದು ರಾಕ್ಷಸನಾಗಿರಲಿಲ್ಲ. ಅದು ದಶರಥನ ಸ್ನೇಹಿತನಾದ ಜಟಾಯುವೆಂಬ ಪಕ್ಷಿ. ಅದು ತನ್ನ ತಂದೆಯ ಸ್ನೇಹಿತನೆಂದು ತಿಳಿದು ರಾಮನಿಗೆ ಸಂತೋಷವಾಯಿತು. ಕ್ರೂರ ಮೃಗಗಳೂ ರಾಕ್ಷಸರೂ ತುಂಬಿದ ಆ ಕಾಡಿನಲ್ಲಿ ತನಗೆ ಸಹಾಯಕನಾಗಿ ನಿಲ್ಲುವೆನೆಂದ ಆ ಪಕ್ಷಿಯ ಮಾತು ಕೇಳಿ, ಆ ಸಂತೋಷ ಇನ್ನೂ ಹೆಚ್ಚಿತು. ಜಟಾಯುವಿಗೆ ಪಿತೃಭಕ್ತಿಯಿಂದ ನಮಸ್ಕರಿಸಿ, ಅದರ ಸೇವೆಯನ್ನು ಆದರದಿಂದ ಸ್ವೀಕರಿಸಿ, ರಾಮನು ಪಂಚವಟಿಗೆ ಬಂದನು.

ಪಂಚವಟಿಯಲ್ಲಿ ಅನುಕೂಲವಾದ ಸ್ಥಳ ನೋಡಿ ಲಕ್ಷ್ಮಣನು ಆಶ್ರಮ ವನ್ನು ಕಟ್ಟಿದನು. ಸಮೀಪದಲ್ಲಿಯೇ ಕೊಳ. ಸುತ್ತ ಚೆಲುವು ಹೂ ಹಣ್ಣಿನ ಗಿಡ ಮರಗಳು. ಹಳ್ಳ ತಿಟ್ಟಿಲ್ಲದ ನೆಲ. ಸಮಿತ್ತು, ಪುಷ್ಪ, ದರ್ಭೆಗಳೆಲ್ಲ ಸಮೀಪದಲ್ಲೆ. ಅಂತಹ ಸ್ಥಳವನ್ನು ಲಕ್ಷ್ಮಣನು ಆಯ್ದುದು ಸೀತಾರಾಮರಿಗೂ ಮನಸ್ಸಿಗೆ ಒಪ್ಪಿತು. ಅಲ್ಲಿ ಮೂವರೂ ಜಟಾಯುವಿನೊಡನೆ ವಾಸಿಸುತ್ತಿದ್ದರು.

ಹೀಗೆಯೇ ಇರಲು ಒಂದು ದಿನ ಶೂರ್ಪನಖಿಯೆಂಬ ರಾಕ್ಷಸಿಯು ಪಂಚವಟಿಗೆ ಬಂದಳು. ಅವಳು ರಾವಣನ ತಂಗಿ. ಪಂಚವಟಿಗೆ ಎಂದಿನಂತೆ

ಬಂದವಳು ಅಲ್ಲಿಯ ಆಶ್ರಮದ ಮುಂದೆ ಕುಳಿತಿದ್ದ ಸೀತಾರಾಮರನ್ನು ಕಂಡಳು. ರಾಮನ ರೂಪು ಲಾವಣ್ಯಗಳನ್ನು ಕಂಡು ಅವಳಿಗೆ ಮೋಹ ಹುಟ್ಟಿತು. ಮನಸ್ಸಿಗೆ ಬಂದ ವೇಷ ತಾಳಲು ಬಲ್ಲ ಅವಳು ರಾಮನಲ್ಲಿಗೆ ಬಂದು ತನ್ನನ್ನು ವರಿಸೆಂದು ಬೇಡಿದಳು. ಆ ವಿಕಾರ ರೂಪದ ರಾಕ್ಷಸಿಯ ಭಿಕ್ಷೆ ಕೇಳಿ ರಾಮನಿಗೆ ನಗು ಬಂತು. ಆದರೆ ಕಾಮದಿಂದ ಉನ್ಮತ್ತಳಾದ ರಾಕ್ಷಸಿಯಾದರೂ, ಅವಳು ಹೆಂಗಸು. ಅವಳನ್ನು ತಟಾರನೆ ಅಂದು ನೋಯಿಸಬಾರದು. ಅದಕ್ಕಾಗಿ ರಾಮನು ಪರಿಹಾಸದಿಂದ ತನಗೆ ಆಗಲೇ ಮದುವೆಯಾಗಿದೆಯೆಂದು ಸೀತೆಯನ್ನು ತೋರಿಸಿದನು. ಸಪತ್ನಿಯಾಗಿರುವುದು ಹಿತಕರವಲ್ಲವೆಂದನು. ದೂರದಲ್ಲಿ ಕೈಕಟ್ಟಿ ನಿಂತ ಲಕ್ಷ್ಮಣನನ್ನು ತೋರಿಸಿ, ಒಂಟಿಯಾದವನನ್ನು ಮದುವೆಯಾಗುವುದು ಲೇಸೆಂದನು. ಶೂರ್ಪನಖಿಯು ಲಕ್ಷ್ಮಣನನ್ನು ನೋಡಿದಳು. ಲಕ್ಷ್ಮಣನೂ ಸುಂದರಾಕಾರನೆ. ಶೂರ್ಪನಖಿಯು ತನ್ನ ಪ್ರಣಯ ಭಿಕ್ಷೆಯನ್ನು ಪುನಃ ಲಕ್ಷ್ಮಣನಲ್ಲಿ ಬೇಡಿದಳು. ಲಕ್ಷ್ಮಣನು ಅಣ್ಣನ ಮಾತಿನ ಅರ್ಥವನ್ನು ಗ್ರಹಿಸಿದನು. ತಾನು ರಾಮನ ದಾಸನು, ದಾಸನನ್ನು ಕೈ ಹಿಡಿದು ದಾಸಿಯಾಗಿರುವುದು ಹಿತವಲ್ಲವೆಂದನು ಅಣ್ಣ ತಮ್ಮಂದಿರ ಪರಿಹಾಸವು ಆ ರಾಕ್ಷಸಿಗೆ ತಿಳಿಯಿತು. ಅವಳ ರೋಷಕ್ಕೆ ಅಳತೆಯಿಲ್ಲದೆ ಹೋಯಿತು. ಆ ಸೀತೆಯೊಬ್ಬಳು ಇರುವುದರಿಂದಲ್ಲವೆ ರಾಮನು ತನ್ನನ್ನು ಇಷ್ಟು ಲಘುವಾಗಿ ಕಾಣುವುದು, ಎಂದುಕೊಂಡು ಶೂರ್ಪನಖಿಯು, ಸೀತೆಯನ್ನು ನುಂಗಿಬಿಡುವೆನೆಂದು ಅಬ್ಬರಿಸಿ ಮುಂದೆ ನುಗ್ಗಿದಳು. ಅವಳ ಆರ್ಭಟ ಕೇಳಿ ಸೀತೆಯು ನಡುಗಿದಳು. ಪತ್ನಿಯ ಭೀತಿಯನ್ನೂ ರಾಕ್ಷಸಿಯ ಆರ್ಭಟವನ್ನೂ ಕೇಳಿ, ರಾಮನು, ಶೂರ್ಪನಖಿಯನ್ನು ತಡೆದು ಶಿಕ್ಷಿಸೆಂದು ಲಕ್ಷ್ಮಣನಿಗೆ ಆಜ್ಞೆಮಾಡಿದನು. ಲಕ್ಷ್ಮಣನು ಅಣ್ಣನಾಜ್ಞೆಯಂತೆ ಅವಳನ್ನು ತಡೆದು ಅವಳ ಕಿವಿ ಮೂಗುಗಳನ್ನು ಕುಯಿದುಬಿಟ್ಟನು. ಶೂರ್ಪನಖಿಯ ರೂಪು ಮೊದಲಿಗಿಂತ ಹೆಚ್ಚು ವಿಕಾರವಾಯಿತು. ತನಗೆ ಎಂದೂ ಆಗದ ಪರಾಭವದ ನೋವಿಗೆ ಗಾಯಗಳ ನೋವೂ ಸೇರಿತು ಭೂಮ್ಯಾಕಾಶಗಳು ಬಿರಿಯುವ ರೀತಿ ವಿಕಾರವಾಗಿ ಕೂಗಿಕೊಳ್ಳುತ್ತ, ಶೂರ್ಪನಖಿಯು ನಡುಕಾಡಿಗೆ ಓಡಿದಳು.

ಅಲ್ಲಿಗೆ ಕತೆ ಮುಗಿಯಲಿಲ್ಲ. ಮುಂದಿನ ಕತೆಗೆ ಅದು ಮೂಲವಾಯಿತು, ಅಷ್ಟೆ.

# ಸೀತಾ ಹರಣ

ಕಿವಿ ಮೂಗುಗಳನ್ನು ಕಳೆದುಕೊಂಡು, ಶೂರ್ಪನಖಿಯು, ಪ್ರತೀಕಾರಕ್ಕೆ ಉದ್ಯುಕ್ತಳಾಗಿ ಖರನ ಬಳಿ ಓಡಿ ಬಂದಳು. ತಂಗಿಗೆ ಆದ ಅಪಮಾನವನ್ನು ಕೇಳಿ ಖರನು ಕ್ರುದ್ಧನಾದನು. ದಂಡಕಾರಣ್ಯಕ್ಕೆ ಬಂದು ತನ್ನ ತಂಗಿಯ ತೇಜೋವಧೆ ಮಾಡಿದ ಮೂವರನ್ನೂ ಧ್ವಂಸಮಾಡಿ ಬನ್ನಿರೆಂದು ಹದಿನಾಲ್ಕು ಮಂದಿ ರಾಕ್ಷಸಪ್ರಮುಖರನ್ನು ಕಳುಹಿಸಿದನು. ಮಹಾ ಸಾಹಸಿಗಳೆಂದು ಕೊಚ್ಚಿಕೊಂಡು ಹೋದ ಹದಿನಾಲ್ವರೂ ರಾಮನ ಹದಿನಾಲ್ಕು ಬಾಣಗಳಿಗೆ ತುತ್ತಾದರು. ಅದು ಕಂಡು ಶೂರ್ಪನಖಿಯು ಭಯಗೊಂಡು ಮತ್ತೆ ಖರನನ್ನು ಸಮೀಪಿಸಿ ಆ ರಾಕ್ಷಸಪ್ರಧಾನರ ವಧೆಯನ್ನು ತಿಳಿಸಿದಳು. ಖರನ ಕೋಪ ಮಿತಿಮೀರಿತು. ದೂಷಣ ತ್ರಿಶಿರಸ್ಸು ಎಂಬ ತನ್ನೆರಡು ಸೇನಾಪತಿಗಳನ್ನು ಕರೆದುಕೊಂಡು ತಾನೇ ಯುದ್ಧಕ್ಕೆ ಹೊರಟನು. ಜೊತೆಯಲ್ಲಿ ಹದಿನಾಲ್ಕು ಸಾವಿರ ರಾಕ್ಷಸರ ಪಡೆ ನಡೆಯಿತು. ದೂರದಲ್ಲಿಯೇ ಬರುತ್ತಿದ್ದ ಸೇನೆಯನ್ನು ರಾಮನು ಕಂಡನು. ಅವರ ಉದ್ದೇಶವೇನೆಂದು ಅವನಿಗೆ ತಿಳಿದೇ ಇತ್ತು. ಸೀತೆಯನ್ನು ಒಂದು ಸುರಕ್ಷಿತವಾದ ಗುಹೆಯಲ್ಲಿ ಇರಿಸಿ, ಲಕ್ಷ್ಮಣನನ್ನು ಅವಳ ರಕ್ಷಣೆಗೆ ನಿಲಿಸಿ, ತಾನೊಬ್ಬನೇ ಆ ರಾಕ್ಷಸರನ್ನು ಎದುರಿಸಲು ನಿಂತನು. ಯುದ್ಧ ಮೊದಲಾಯಿತು. ಅಂತಹ ಮಹಾಸೇನೆ ಕೂಡ ರಾಮನೆದುರು ನಿಲ್ಲಲಾರದೆ ಹೋಯಿತು. ದೂಷಣ ತ್ರಿಶಿರಸ್ಸುಗಳು ಮೊದಲಾಗಿ ಎಲ್ಲರೂ ಒಬ್ಬೊಬ್ಬರಾಗಿ ಮಡಿದುರುಳಿದರು. ತನ್ನ ಸೇನೆಯೆಲ್ಲವೂ ನಾಶವಾದುದನ್ನು ಕಂಡು, ಅದುವರೆಗು ಯುದ್ಧ ನಡೆಸುತ್ತಿದ್ದ ಖರನು ತಾನೇ ಯುದ್ಧ ಮಾಡಲು ಎದುರು ನಿಂತನು. ರಾಮನು ಮೊದಲಿನಂತೆಯೇ ಯುದ್ಧ ಮಾಡಿದನು. ಖರನ ಬಿಲ್ಲು ಬಾಣ ಮೊದಲಾದ ಆಯುಧಗಳನ್ನೆಲ್ಲ ರಾಮಬಾಣ ಪುಡಿ ಮಾಡಿತು. ಅವನ ರಥ ಕುದುರೆಗಳೂ ನಾಶವಾದುವು ಹೀಗೆ ಸೇನಾ ಸಾಮಗ್ರಿಗಳನ್ನು ಕಳಕೊಂಡ ಖರನನ್ನು ಕಂಡು ರಾಮನಿಗೆ ಅಯ್ಯೋ ಎನಿಸಿತು ಹಿಂದಿರುಗೆಂದು ಅವನಿಗೆ ಬುದ್ಧಿವಾದ ಹೇಳಿದನು. ಅದಕ್ಕೆ ಉತ್ತರವಾಗಿ ಖರನು, ತನ್ನಲ್ಲಿ ಉಳಿದಿದ್ದ ಗದೆಯನ್ನು ರಾಮನ ಮೇಲೆ ಬೀಸಿದನು. ಹಾರಿ ಬಂದ ಆ ಗದೆಯು ರಾಮನ ಬಾಣಕ್ಕೆ ಸಿಕ್ಕಿ ಚೂರಾಯಿತು. ರಾಮನು

ಪಶ್ಚಾತ್ತಾಪದಿಂದ ಅವನಿಗೆ ವಿವೇಕ ಹೇಳಿ ಪುನಃ ಹಿಂದಿರುಗೆಂದನು. ಖರನು ಕೇಳಲಿಲ್ಲ. ಪಕ್ಕದಲ್ಲಿದ್ದ ಸಾಲವೃಕ್ಷವನ್ನು ಕಿತ್ತುಕೊಂಡು ರಾಮನ ಮೇಲೆ ಹಾಯ್ದನು. ಮೂರ್ಖನಿಗೆ ಬುದ್ಧಿ ಹೇಳಿ ಫಲವಿಲ್ಲನೆಂದು ರಾಮನಿಗೆ ತೋರಿತು. ಇನ್ನು ವಿಳಂಬ ಮಾಡದೆ ಅಗಸ್ತ್ಯರು ಕೊಟ್ಟ ಬಾಣಗಳಲ್ಲಿ ಒಂದನ್ನು ತೊಟ್ಟು ಬಿಟ್ಟನು. ಅದು ಖರನ ಹೃದಯವನ್ನು ಭೇದಿಸಿ, ಅವನು ಮಡಿದನು. ಋಷಿಗಳೆಲ್ಲರೂ ನಿರಾತಂಕರಾಗಿ, ರಾಮನನ್ನು ಹರಸಿದರು. ಸೀತಾ ರಾಮ ಲಕ್ಷ್ಮಣರು ಪುನಃ ಸಂತೋಷದಿಂದ ಒಟ್ಟುಗೂಡಿದರು.

ಹೀಗೆ ಖರನ ಮಾರ್ಬಲವು ನಿರ್ಮೂಲವಾಯಿತೆಂದರೂ, ಅಕಂಪನೆಂಬ ರಾಕ್ಷಸನು ಮಾತ್ರ ಹೇಗೋ ಜೀವವುಳಿಸಿಕೊಂಡು ಲಂಕೆಗೆ ಓಡಿದನು. ಲಂಕಾಧಿಪತಿಯಾದ ರಾವಣನೂ ಖರನೂ ಸಹೋದರರು. ರಾವಣನೆಂದರೆ ಮೂರು ಲೋಕವೂ ಹೆದರುವುದು. ಅಂತಹವನ ತಮ್ಮನನ್ನೂ ಅವನ ಪಡೆಯನ್ನೂ ರಾಮನೆಂಬ ಮನುಷ್ಯನೊಬ್ಬನು ಕೊಂದನೆಂದು, ರಾವಣನು ಕಿಡಿಕಿಡಿಯಾದನು. ತನಗೆ ಯಾರು ಇದಿರು ನಿಂತಾರೆಂದು ರಾಮನ ಮೇಲೆ ನಡೆದನು. ದಾರಿಯಲ್ಲಿ ಅವನಿಗೆ ಮಾರೀಚನ ಆಶ್ರಮವು ಸಿಕ್ಕಿತು. ಆ ಮಾರೀಚನು ತಾಟಕೆಯ ಮಗನು. ಹಿಂದೆ ವಿಶ್ವಾಮಿತ್ರನ ಆಶ್ರಮದಲ್ಲಿ, ರಾಮಬಾಣಕ್ಕೆ ಸಿಕ್ಕಿ ತೂರಿಕೊಂಡು ಸಮುದ್ರದಲ್ಲಿ ಬಿದ್ದವನೇ ಅವನು. ರಾಮನ ಶಕ್ತಿ ಸಾಮರ್ಥ್ಯಗಳು ಅವನಿಗೆ ಗೊತ್ತಿತ್ತು. ತನಗೆ ಗೊತ್ತಿರುವ ರಾಮನ ವಿಷಯವನ್ನೆಲ್ಲ ತಿಳಿಸಿ, ಮಾರೀಚನು, ರಾವಣನು ಲಂಕೆಗೆ ಹಿಂದಿರುಗುವಂತೆ ಮಾಡಿದನು.

ರಾವಣನು ಯುದ್ಧದ ಯೋಚನೆ ಬಿಟ್ಟು ಲಂಕೆಗೆ ಬಂದನು. ಅಲ್ಲಿ ಶೂರ್ಪನಖಿ ಕಾದಿದ್ದಳು. ಲಕ್ಷ್ಮಣನು ತನ್ನ ಕಿವಿ ಮೂಗುಗಳು ಕತ್ತರಿಸಿದುದನ್ನು ಅಣ್ಣನಿಗೆ ತೋರಿಸಿದಳು. ಅದನ್ನು ಕಂಡೂ ರಾವಣನು ಸುಮ್ಮನಿದ್ದನು. ಖರನೇ ಮೊದಲಾದ ಅಗಣಿತ ರಾಕ್ಷಸರು ನಾಶವಾದುದನ್ನು ವರ್ಣಿಸಿದಳು. ಅದನ್ನು ಕೇಳಿಯೂ ರಾವಣನು ಅಲುಗಲಿಲ್ಲ. ಶೂರ್ಪನಖಿಯು ಅಷ್ಟಕ್ಕೆ ಸುಮ್ಮನಾಗಲಿಲ್ಲ. ಅವಳಲ್ಲಿ ಇನ್ನೂ ಒಂದು ಅಸ್ತ್ರವಿತ್ತು. ಅದನ್ನೂ ಉಪಯೋಗಿಸಿದಳು.

ರಾವಣನು ವೀರಾಧಿವೀರನಾದರೂ ಅವನಲ್ಲಿ ಒಂದು ದೌರ್ಬಲ್ಯವಿತ್ತು. ಚೆಲುವಾದ ಹೆಂಗುಸರೆಂದರೆ ಅವನ ಬಾಯಲ್ಲಿ ನೀರೂರುತ್ತಿತ್ತು. ಅಂತಹವರನ್ನು ಹೊಂದಲು ಏನು ಬೇಕಾದರೂ ಮಾಡುವುದಕ್ಕೆ ಸಿದ್ಧನಾಗಿದ್ದನು. ಅದು ಶೂರ್ಪನಖಿಗೆ ಗೊತ್ತಿತ್ತು. ಆ ಜ್ಞಾನವನ್ನು ಉಪಯೋಗಿಸಿಕೊಂಡಳು. ಸೀತೆಯ ಸೌಂದರ್ಯದ ಸುದ್ದಿಯೆತ್ತಿ, ಮುಡಿಯಿಂದ ಹಿಡಿದು ಅಡಿಯವರೆಗೂ ಅವಳನ್ನು ಹತ್ತು ಸಾವಿರ ವಿಧಗಳಲ್ಲಿ ವರ್ಣಿಸಿದಳು. ರಾವಣನ ಕಿವಿ ನೆಟ್ಟಗಾಯಿತು. ಶೂರ್ಪನಖಿಯು ವರ್ಣನೆಯನ್ನು ಇನ್ನೂ ವಿವರಗೊಳಿಸಿದಳು. ರಾಮನು ತನಗೆ ಬರಬೇಕಾದ ರಾಜ್ಯಗಳನ್ನು ಕಳೆದುಕೊಂಡು ಹದಿನಾಲ್ಕು ವರ್ಷ ವನವಾಸ ಬಂದವನು. ಕಾಡಿನ ಕಷ್ಟಗಳು ಏನಿದ್ದರೂ ಅವುಗಳನ್ನೆಲ್ಲ ಮರೆತು ಸುಖವಾಗಿರುವನು. ಆ ಲೋಕಸುಂದರಿಯಾದ ಸೀತೆಯೊಬ್ಬಳ ಸಹವಾಸದಿಂದ ತನ್ನೆಲ್ಲ ಕಷ್ಟಗಳನ್ನು ಗಣಿಸದಿರಲು ಶಕ್ತನಾಗಿರುವನು. ಆ ಸೀತೆಯ ಪತಿ ರಾಮನು, ಲಂಕೇಶ್ವರನ ತಂಗಿಗೆ ಮಾನಭಂಗ ಮಾಡಿರುವನು. ಅವನ ಬಾಣಕ್ಕೆ ಸಿಕ್ಕಿ ರಾವಣನ ತಮ್ಮನೂ, ಅನೇಕ ರಾಕ್ಷಸ ಸಮೂಹವೂ ಹಾಳಾಗಿರುವುದು. ಈ ಎಲ್ಲ ಅಪಚಾರಗಳಿಗೆ ತಕ್ಕ ಶಿಕ್ಷೆಯೆಂದರೆ, ತಕ್ಕ ಪ್ರತೀಕಾರವೆಂದರೆ, ಆ ಸೀತೆಯನ್ನು ತಂದು ರಾವಣನು ಮದುವೆಮಾಡಿಕೊಳ್ಳುವುದೇ. ಅಂತಹ ಹೆಂಗಸು ತ್ರೈಲೋಕ್ಯವಿಜಯಿಯಾದ ರಾವಣನಂತಹವನಿಗೆ ತಕ್ಕವಳಲ್ಲದೆ, ಬಡ ತಾಪಸನಂತಿರುವ ರಾಮನಿಗಲ್ಲ. ಆದರೂ ರಾವಣನು ರಾಮನ ಮೇಲೆ ದಂಡೆತ್ತಿ ಹೋಗಬಾರದು. ಖರ ದೂಷಣರ ಪಡೆಯನ್ನು ಅವನು ಎಷ್ಟು ಲೀಲಾಜಾಲವಾಗಿ ಕೊಂದನು! ಅದಕ್ಕಿಂತ ಮೋಸಮಾಡಿ ಸೀತೆಯನ್ನು ಲಂಕೆಗೆ ಕದ್ದು ತರಬೇಕು. ಅವಳನ್ನು ಕಳದುಕೊಂಡು ರಾಮನು ಕೊರಗಿ ಸಾಯಬೇಕು. ಅವರು ಮೂವರೂ ಸೀತಾರಾಮ ಲಕ್ಷ್ಮಣರು ಮಾಡಿರುವ ಘೋರ ಅಪರಾಧಗಳಿಗೆ ಅದೆ ತಕ್ಕ ಶಿಕ್ಷೆ, ಅದೆ ತಕ್ಕ ಪ್ರತೀಕಾರ.

ಶೂರ್ಪನಖಿಯ ಮಾತು ಮುಗಿಯುವ ಮುಂಚೆಯೇ ರಾವಣನು ಸೀತೆಯನ್ನು ಕದ್ದು ತರುವ ಮನಸ್ಸು ಮಾಡಿದನು. ಅವಳು ಮಾತನಾಡುತ್ತಿರುವಾಗ ಸೀತಾಹರಣಕ್ಕೆ ತಕ್ಕ ಮಾಯವನ್ನು ಯೋಚಿಸುತ್ತಿದ್ದನು. ಅವಳು ಇನ್ನೂ ಮಾತನಾಡುತ್ತಿದ್ದಂತೆಯೆ ತನ್ನ ಪುಷ್ಪಕವಿಮಾನವನ್ನು ಹತ್ತಿಕೊಂಡು ಮಾರೀಚನ ಆಶ್ರಮಕ್ಕೆ ಪುನಃ ಹೋದನು.

ರಾವಣನು ತನ್ನ ಉಪಾಯವನ್ನು ಮಾರೀಚನಿಗೆ ತಿಳಿಸಿದನು. ಮಾರೀಚನು ತನ್ನ ಮಾಯೆಯಿಂದ ತಾನು ಚಿನ್ನದ ಜಿಂಕೆಯಾಗಬೇಕು. ಆಗಿ, ರಾಮಾಶ್ರಮದ ಸುತ್ತ ಸುಳಿಯಬೇಕು. ಸೀತೆಯು ಅದನ್ನು ಕಂಡು ಆಸೆಗೊಳ್ಳುವಳು. ಅಂತಹ ಸುಂದರ ಮೃಗವನ್ನು ತನಗೆ ತಂದುಕೊಡೆಂದು ರಾಮನನ್ನು ಪೀಡಿಸುವಳು. ಅವಳ ಆಸೆಯನ್ನು ನಡೆಸಲು, ರಾಮನು ಆ ಜಿಂಕೆಯ ಬೆನ್ನು ಹತ್ತುವನು. ಲಕ್ಷ್ಮಣನೇನಾದರೂ ಅಲ್ಲಿಯೇ ಸೀತೆಯ ಜೊತೆಯಲ್ಲಿ ನಿಂತರೆ, ಮಾರೀಚನು ರಾಮನ ಧ್ವನಿಯನ್ನು ಅನುಕರಿಸಿ, ಲಕ್ಷ್ಮಣನನ್ನು ಸಹಾಯಕ್ಕೆ ಕರೆಯಬೇಕು. ಹೀಗೆ ರಾಮ ಲಕ್ಷ್ಮಣರು ಇಲ್ಲದೆ ಒಂಟಿಯಾದ ಸೀತೆಯನ್ನು ರಾವಣನು ಕದ್ದು ತರಬಹುದು. ಅದು ರಾವಣನ ಉಪಾಯ.

ಅದು ಕೇಳಿ ಮಾರೀಚನಿಗೆ ನಡುಕ ಹತ್ತಿತು. ಒಂದು ಸಲ ರಾಮನ ಪೆಟ್ಟು ತಿಂದಿದ್ದನಾಗಿ, ಅದರ ಜೋರು ಅವನಿಗೆ ಗೊತ್ತಿತ್ತು. ಮೊದಲಿನಂತೆಯೇ ರಾವಣನನ್ನು ಲಂಕೆಗೆ ಹಿಂದಿರುಗಿಸಲು ಪ್ರಯತ್ನಿಸಿದನು. ರಾಮಲಕ್ಷ್ಮಣರ ಪರಾಕ್ರಮಗಳನ್ನೆಲ್ಲ ಸಾಂಗವಾಗಿ ವರ್ಣಿಸಿದನು. ಪರದಾರಾಪಹರಣವು ಪಾಪವೆಂದು ವಿವರಿಸಿದನು. ರಾವಣನು ಯಾವೊಂದು ಮಾತನ್ನೂ ಕೇಳುವಂತಿರಲಿಲ್ಲ. ಮೊದಲೆಂದರೆ, ಅವನು ಬಂದುದು ಪ್ರತೀಕಾರಕ್ಕೆ. ಈಗ ಬಂದಿರುವುದು ಒಬ್ಬ ಹೆಂಗಸನ್ನು ಹೊಂದುವುದಕ್ಕೆ. ರಾವಣನಿಗೆ ಮಾರೀಚನ ಉಪದೇಶ ಬೇಕಾಗಿರಲಿಲ್ಲ, ಅವನ ಸಹಾಯ ಬೇಕಾಗಿತ್ತು. ಸಹಾಯ ಮಾಡಲು ಮಾರೀಚನಿಗೆ ಮನಸ್ಸಿಲ್ಲದುದನ್ನು ಕಂಡು ರಾವಣನು ಅವನನ್ನು ಕೊಲ್ಲುವುದಾಗಿ ಹೆದರಿಸಿದನು. ಮಾರೀಚನು ಏನೂ ಮಾಡುವಂತಿರಲಿಲ್ಲ. ಮಾಯಾಮೃಗವಾಗಿ ಅಲ್ಲಿ ಹೋದರೆ, ರಾಮನ ಬಾಣವು ತಪ್ಪದೆ ಬಂದು ಕೊಲ್ಲುವುದು. ಹೋಗದೆ ಇಲ್ಲಿ ನಿಂತರೆ, ರಾವಣನ ಕೈಲಿ ಹತನಾಗಬೇಕು. ಕಡೆಗೆ ಮಾರೀಚನು, ರಾವಣನಿಗೆ ಸಹಾಯ ಮಾಡುವುದಾಗಿ ಒಪ್ಪಲಾರದೆ ಒಪ್ಪಿದನು. ಮಾರೀಚ ರಾವಣರಿಬ್ಬರೂ ಆಗಲೇ ಪುಷ್ಪಕ ವಿಮಾನವನ್ನು ಏರಿ ರಾಮನ ಆಶ್ರಮದ ಬಳಿ ಬಂದರು. ಮಾರೀಚನು ಚಿನ್ನದ ಜಿಂಕೆಯಾದನು. ರಾವಣನು ಸೀತೆಯನ್ನು ಅಪಹರಿಸಲು ಹೊಂಚು ಹಾಕುತ್ತ ಕುಳಿತನು.

ಮಾರೀಚನು ಚಿನ್ನದ ಜಿಂಕೆಯಾಗಿ ಸುಳಿದಾಡುವಾಗ, ಸೀತೆಯು ಆಶ್ರಮದ ಬಳಿಯ ವನದಲ್ಲಿ ಹೂವಾಯುತ್ತಿದ್ದಳು. ಚಿಟ್ಟೆಯಂತೆ ಹಾರಾಡುತ್ತಿದ್ದ ಮಾಯಾಮೃಗವನ್ನು ಕಂಡು ರಾಮನನ್ನು ಕರೆದಳು ಎಂದೂ ಕಾಣದ ಆ ವಿಚಿತ್ರ ಮೃಗವನ್ನು ತನಗೆ ಹಿಡಿದುಕೊಡೆಂದು ಪ್ರಾರ್ಥಿಸಿದಳು. ರಾಮನು ಕೂಡ ಅಂತಹ ಮೃಗವನ್ನು ತಾನು ಅದುವರೆಗೆ ಕಂಡುದಿಲ್ಲೆಂದು ಒಪ್ಪಿಕೊಂಡನು. ಲಕ್ಷ್ಮಣನು ಮಾತ್ರ ಅದು ರಾಕ್ಷಸರ ಮಾಯೆಯಿರಬೇಕೆಂದು ಸಂದೇಹಪಟ್ಟನು. ಆದರೆ ಸೀತೆಯು ಅಪೇಕ್ಷೆಯ ಮುಂದೆ ಲಕ್ಷ್ಮಣನ ಭಯ ಶಂಕೆಗಳಿಗೆ ಎಡೆ ಸಿಗಲಿಲ್ಲ. ಅದು ಜೀವಂತವಾಗಲಿ ಮೃತವಾಗಲಿ, ಆ ಸುವರ್ಣ ಮೃಗವು ಸೀತೆಗೆ ಬೇಕು. ರಾಮನಿಗೆ ಅವಳ ಆಸೆಗಳನ್ನು ಈಡೇರಿಸುವದೇ ಕರ್ತವ್ಯ. ಅದರಿಂದ ಆ ಜಿಂಕೆಯನ್ನು ಬೇಟೆಯಾಡಬೇಕು. ಒಂದು ವೇಳೆ ಆ ಮೃಗವು ಲಕ್ಷ್ಮಣನು ಸಂದೇಹಪಟ್ಟಂತೆ ರಾಕ್ಷಸನಾಗಿದ್ದರೆ, ರಾಕ್ಷಸನನ್ನು ಕೊಲ್ಲುವುದೂ ರಾಮನ ಕರ್ತವ್ಯ. ಹಾಗೂ ಆ ಮೃಗವನ್ನು ಬೇಟೆಯಾಡಬೇಕು.

ಹೀಗೆ ಮೃಗವನ್ನು ಬೇಟೆಯಾಡುವ ಮನಸ್ಸು ಮಾಡಿ, ರಾಮನು, ಸೀತೆಯನ್ನು ಲಕ್ಷ್ಮಣನ ರಕ್ಷಣೆಯಲ್ಲಿಟ್ಟು, ಬಿಲ್ಲು ಬಾಣ ಹಿಡಿದು ಹೊರಟನು. ರಾಮನು ಹಿಡಿಯಲೆಂದು ಹೋದಂತೆಲ್ಲ ಆ ಮೃಗ ತಪ್ಪಿಸಿಕೊಳ್ಳುವುದು. ಒಮ್ಮೆ ಕಾಣುವುದು, ಒಮ್ಮೆ ಮಾಯವಾಗುವುದು. ಹೀಗೆಯೇ ಆಟವಾಡಿಸಿ ರಾಮನನ್ನು ಬಹುದೂರ ಕಾಡಿನೊಳಗೊಯ್ದಿತು. ಕಡೆಗೆ ರಾಮನಿಗೆ ಕೋಪ ಬಂತು. ಜಿಂಕೆಯನ್ನು ಕೊಲ್ಲುವುದೆ ಸರಿಯೆಂದು ಒಂದು ಪ್ರಜ್ವಲಿಸುವ ಬಾಣವನ್ನು ಎಳೆದೆಸೆದನು. ಬಾಣದ ಗುರಿ ತಪ್ಪಲಿಲ್ಲ. ಮಾರೀಚನು ಮೊದಲಿನ ರಾಕ್ಷಸರೂಪವನ್ನು ತಾಳಿ ದೊಪ್ಪನೆ ಬಿದ್ದನು. ಬೀಳುವಾಗ ರಾವಣನ ಆಜ್ಞೆಯನ್ನು ಮರೆಯಲಿಲ್ಲ. ರಾಮನ ಧ್ವನಿಯನ್ನು ಅನುಕರಿಸಿ 'ಓ ಲಕ್ಷ್ಮಣಾ! ಕಾಪಾಡು!' ಎಂದು ಆರ್ತತೆಯಿಂದ ಬೇಡುತ್ತ ಪ್ರಾಣಬಿಟ್ಟನು.

ರಾವಣನು ಎಣಿಸಿದ್ದಂತ ಆ ಕೂಗು ಆಶ್ರಮಕ್ಕೆ ಮುಟ್ಟಿತು. ಸೀತೆಯು ಅದು ಕೇಳಿ ಬೆಚ್ಚಿದಳು. ರಾಮನಿಗೇನೋ ಅಪಾಯವಾಯಿತೆಂದು ಕಾತರಳಾಗಿ, ಲಕ್ಷ್ಮಣನನ್ನು ಸಹಾಯಕ್ಕೆ ಹೋಗೆಂದು ಬೇಡಿದಳು. ಆದರೆ ರಾಮನನ್ನು ರಾಕ್ಷಸರಾರೂ ಗಾಯಗೊಳಿಸಲಾರರೆಂದು ಲಕ್ಷ್ಮಣನಿಗೆ ಗೊತ್ತು.

ಅವನು ಸೀತೆಯಂತೆ ಗಾಬರಿಗೊಳ್ಳದೆ ನಿಶ್ಚಿಂತನಾಗಿದ್ದನು. ಅತ್ತಿಗೆಯ ಭಯವನ್ನು ಹೋಗಲಾಡಿಸಲು ಯತ್ನಿಸಿದನು. ಅವಳ ರಕ್ಷಣೆಗೆ ನಿಲ್ಲಬೇಕಾದ ತನ್ನ ಕರ್ತವ್ಯವನ್ನು ಬಿಡೆನೆಂದನು. ಅದು ಎಲ್ಲ ರಾಕ್ಷಸರ ಮಾಯೆಯೆಂದು ಎಷ್ಟು ಹೇಳಿದರೂ ಸೀತೆಯು ನಂಬಲಿಲ್ಲ ಆ ಕೇಳಿ ಬಂದ ಧ್ವನಿಯಿಂದಾದ ಭಯವೊಂದು ಕಡೆ, ರಾಮನ ಸಹಾಯಕ್ಕೆ ಲಕ್ಷ್ಮಣನು ತಾನು ಹೋಗಬೇಕಾಗಿಲ್ಲವೆಂದು ನಿಂತುದಕ್ಕೆ ಕೋಪವೊಂದು ಕಡೆ ಬಂದು, ಸೀತೆಯು ಮೈಮರೆತು "ಲಕ್ಷ್ಮಣ! ಮನಸ್ಸಿನಲ್ಲಿ ಕೆಟ್ಟ ಅಭಿಪ್ರಾಯಗಳನ್ನು ಇಟ್ಟು, ರಾಮನ ಸಹಾಯಕ್ಕೆ ಹೋಗದಿರುವುದು ತರವಲ್ಲ. ಸೋದರ ವೇಷದಲ್ಲಿರುವ ಅವನ ಶತ್ರು ನೀನು" ಎಂದಳು.

ಲಕ್ಷ್ಮಣನು ಆ ಮಾತು ಕೇಳಿ ನೊಂದನು. ಮಾತೃಸಮಾನಳಾದ ಅವಳಿಗೆ ನಮಸ್ಕರಿಸಿದನು. ಅವಳನ್ನು ರಕ್ಷಿಸುವಂತೆ ವನದೇವತೆಗಳನ್ನು ಪ್ರಾರ್ಥಿಸಿ, ರಾಮನನ್ನು ಹುಡುಕಿಕೊಂಡು ಹೊರಟನು.

ಇತ್ತ ಸೀತೆ ಒಂಟಿಯಾಗಿ, ತನ್ನ ರಾಮನಿಗೆ ಏನಾಗಿದೆಯೋ ಎಂದು ಅಳುಕುತ್ತ ಆಶ್ರಮದ ಬಾಗಿಲಿನಲ್ಲಿ ನಿಂತಿದ್ದಳು. ಅದೆ ವೇಳೆಯನ್ನು ಕಾಯುತ್ತಿದ್ದ ರಾವಣನು ತನ್ನ ರಾಕ್ಷಸರೂಪವನ್ನು ಬಿಟ್ಟು ತಾಪಸವೇಷದಲ್ಲಿ ಪರ್ಣಶಾಲೆಗೆ ಬಂದನು. ಬ್ರಾಹ್ಮಣನು ಬಂದುದು ಕಂಡು ಸೀತೆಯು ತನ್ನ ದುಃಖವನ್ನು ನುಂಗಿಕೊಂಡು ಅವನ ಸೇವೆಗೆ ಅನುವಾದಳು. ಅವಳ ಅತಿಶಯವಾದ ರೂಪು ಕಂಡು ರಾವಣನು ತಡೆಯಲಾರದೆ ಹೋದನು. ತನ್ನ ಹತ್ತು ತಲೆಯ ಮಹಾ ರೂಪವನ್ನು ತೋರಿ ಸೀತೆಯನ್ನು ಒಲಿಸಹೋದನು. ತಾನು ಲಂಕಾಧಿಪತಿಯು, ಸಾಕ್ಷಾತ್ ಕುಬೇರನ ತಮ್ಮ. ತನ್ನ ಪ್ರಚಂಡ ಶಕ್ತಿಗೆ ಸ್ವರ್ಗ ಮರ್ತ್ಯ ಪಾತಾಳಗಳೆಲ್ಲವೂ ಅಧೀನ. ತನ್ನ ಭೋಗಭಾಗ್ಯಗಳ ವರ್ಣನೆ ಹೇಳಲು ಸಾಧ್ಯವಿಲ್ಲ. ಸೀತೆಯು ತನ್ನಂತಹವನ ಮಡದಿಯಾಗಿರಬೇಕಲ್ಲದೆ ಬೇರೆಯಲ್ಲ.

ಸೀತೆಗೆ ಅವನ ಮಾತು ಕೇಳಿ ಅಸಹ್ಯವಾಯಿತು. ತಾನು ಬ್ರಾಹ್ಮಣನೆಂದುಕೊಂಡು ಉಪಚರಿಸಿದವನು ಕಾಮುಕನಾದ ರಾಕ್ಷಸನೆಂದು ತಿಳಿದು ಭಯಗೊಂಡಳು, ಬೆಚ್ಚಿದಳು. ಲಕ್ಷ್ಮಣನ ಅಭಯಕ್ಕೆ ಕಿವಿಗೊಡದೆ, ಅವನನ್ನು ನಿಷ್ಠುರವಾಗಿ ಬೈದು ಓಡಿಸಿದುದಕ್ಕೆ ಪಶ್ಚಾತ್ತಾಪಪಟ್ಟಳು. ಮಾಯಾ

ಮೃಗಕ್ಕೆ ಮೋಸಹೋಗಿ, ರಾಮ ಲಕ್ಷ್ಮಣರನ್ನು ಅದರ ಹಿಂದಟ್ಟಿ, ಒಂಟಿಯಾಗಿ, ಕಡೆಗೆ ರಾಕ್ಷಸನ ಕೈಗೆ ಸಿಕ್ಕಿದುದಕ್ಕೆ ತನ್ನನ್ನು ತಾನೇ ಹಳಿದುಕೊಂಡಳು. ಆದರೂ ತನ್ನ ಹಿಂದಿನ ಅವಿವೇಕಗಳ ಭೀತಿಯನ್ನು ಮರೆಸಿ ರಾವಣನನ್ನು ಧಿಕ್ಕರಿಸಿದಳು. ತಾನು ರಾಮಚಂದ್ರನ ಹೆಂಡತಿಯು. ರಾಮನೂ ಅವನ ತಮ್ಮ ಲಕ್ಷ್ಮಣನೂ ಬಾಲ್ಯದಿಂದ ಅನೇಕ ಮಂದಿ ರಾಕ್ಷಸರನ್ನು ಧ್ವಂಸ ಮಾಡಿರುವರು. ರಾವಣನ ಈ ಅಕೃತ್ಯವು ಅವರಿಗೆ ತಿಳಿದರೆ, ರಾವಣನು ಮಾತ್ರವಲ್ಲದೆ ಇಡೀ ಲಂಕೆಯೇ ಭಸ್ಮವಾದೀತು.

ರಾವಣನು ಅದಕ್ಕೆಲ್ಲ ಹೆದರುವಂತಿರಲಿಲ್ಲ, ಸೀತೆಯನ್ನು ಪಡೆಯಬೇಕೆಂಬಾಸೆಯ ಮುಂದೆ ಅವನಿಗೆ ಇನ್ನೇನೂ ಕಾಣವೊಲ್ಲದು. ರಾಮಲಕ್ಷ್ಮಣರು ಬರುವ ವೇಳೆಯಾಯಿತು. ಸೀತೆಯೊಡನೆ ಮಾತು ಬೆಳೆಸುತ್ತ ನಿಂತರೆ, ಅವರು ಬಂದರೂ ಬಂದಾರು. ರಾವಣನು ಸೀತೆಯನ್ನು ಬಲಾತ್ಕಾರದಿಂದ ಪುಷ್ಪಕದಲ್ಲಿ ಕುಳ್ಳಿರಿಸಿಕೊಂಡು ಲಂಕೆಗೆ ಹೊರಟನು. ಸೀತೆಯು ಬಿಡಿಸಿಕೊಳ್ಳಲು ಒದ್ದಾಡಿದಳು. ರಾಮ ಲಕ್ಷ್ಮಣರನ್ನು ಕೂಗಿದಳು. ಸದ್ಯ ಅವಳನ್ನು ಕಾಪಾಡುವವರಿರಲಿಲ್ಲ.

ಪುಷ್ಪಕವು ಹೋಗುತ್ತಿತ್ತು. ಸೀತೆಯ ಆರ್ತನಾದವು ನಿಂತಿರಲಿಲ್ಲ. ಅವರು ಹೋಗುವ ಮಾರ್ಗದಲ್ಲಿ ಜಟಾಯುವು ಒಂದು ಮಹಾವೃಕ್ಷದ ಮೇಲೆ ನಿದ್ದೆ ಮಾಡುತ್ತಿತ್ತು. ಸೀತೆಯ ಕೂಗು ಕೇಳಿ ಅದರ ನಿದ್ದೆ ಹೋಯಿತು. ತನ್ನ ಸ್ನೇಹಿತನಾದ ದಶರಥನ ಸೊಸೆಗೆ ಬಂದ ವಿಪತ್ತು ಕಂಡು, ಅರುವತ್ತು ಸಾವಿರ ವರುಷ ಮುಪ್ಪಿನ ಜಟಾಯುವಿನ ಧಮನಿಗಳಲ್ಲಿ ಯೌವನ ರಕ್ತ ದುಡಿಯಿತು. ಭಯಂಕರವಾದ ಕೂಗಿನಿಂದ ತನ್ನ ಅಸಾಧ್ಯ ಕೋಪವನ್ನು ಹೊರಗೆಡುಹುತ್ತ, ಜಟಾಯುವು ರಾವಣನ ಮೇಲೆ ಬಿದ್ದಿತು. ರಾವಣನು ತನ್ನ ಹತ್ತೂ ತೋಳುಗಳಿಂದ ಕಾದನು, ಬಿಲ್ಲುಬಾಣ ಖಡ್ಗ ಗದೆಗಳನ್ನು ಉಪಯೋಗಿಸಿದನು. ಜಟಾಯುವು ತನ್ನ ರೆಕ್ಕೆಗಳಿಂದ ಬಡಿದು, ಕೊಕ್ಕಿನಿಂದ ಕುಕ್ಕಿ, ಕಾಲುಗುರುಗಳಿಂದ ಪರಚಿತು. ಹೀಗೆ ಇಬ್ಬರಿಗೂ ಬಹುಕಾಲ ಯುದ್ಧವಾದರೂ ಜೋಡಿ ಸರಿಯಾಗಿರಲಿಲ್ಲ. ಜಟಾಯುವಿಗೆ ಮುಪ್ಪು; ರಾವಣನಿಗೆ ಅಷ್ಟು ವಯಸ್ಸಾಗಿರಲಿಲ್ಲ. ಜಟಾಯುವಿನ ಮೈಗಾಯದಲ್ಲಿ ರಕ್ತ ಬಸಿದರೆ, ರಾವಣನ ಮೈಯಲ್ಲಿ ಗಾಯ ಆದಂತೆ ಆರುತ್ತಿತ್ತು. ಆ ಅಸಮ

ಯುದ್ಧದಲ್ಲಿ ಜಟಾಯು ಸೋತು ಬಳಲಿತು. ರಾವಣನು ಅದರ ಕಾಲು ರೆಕ್ಕೆಗಳನ್ನು ಕಡಿದು, ಸೀತೆಯನ್ನು ಕೊಂಡು ಮುಂದೆ ಹೋದನು.

ತಾನು ಅನಾಥೆಯಾದುದನ್ನೂ, ತನ್ನ ಸಹಾಯಕ್ಕೆ ಬಂದ ಜಟಾಯುವಿಗಾದ ಪರಾಭವವನ್ನೂ ಸೀತೆಯು ನೆನೆದು ದುಃಖಪಡುತ್ತಿರುವಂತೆಯೇ ವಿಮಾನವು ಮುಂದೆ ಸಾಗುತ್ತಿತ್ತು. ದಾರಿಯಲ್ಲಿ ಕೆಳಗೆ ಪರ್ವತವೊಂದರ ಮೇಲೆ ಕೆಲವು ಕಪಿಗಳು ಕುಳಿತು ತಮ್ಮ ವಿಮಾನವನ್ನೇ ನೋಡುತ್ತಿರುವುದು ಸೀತೆಗೆ ಕಂಡಿತು. ತನ್ನ ಆಭರಣಗಳಲ್ಲಿ ಕೆಲವನ್ನು ಸೀರೆಯ ಚೂರಿನಲ್ಲಿ ಬಿಗಿದು, ರಾವಣನಿಗೆ ತಿಳಿಯದಂತೆ ಅದನ್ನು ಕೆಳಗೆಸೆದಳು. ಅದು ರಾಮನಿಗೆ ಒಂದು ವೇಳೆ ಮುಟ್ಟಿದರೂ ಮುಟ್ಟೀತೆಂದು ಅವಳ ಆಸೆ.

ಮೇಲೆ ಹೋಗುತ್ತಿದ್ದ ಪುಷ್ಪಕ ವಿಮಾನವನ್ನೂ, ಅದರಲ್ಲಿ ರಾವಣನು ಸೀತೆಯನ್ನು ಸೆರೆತಂದುದನ್ನೂ ಕಂಡು, ದೇವತೆಗಳು, ತಮ್ಮ ಬಿಡುಗಡೆಗೆ ಮಾರ್ಗ ಸಿದ್ಧವಾಗುತ್ತಿದೆಯೆಂದು ಹಿಗ್ಗಿದರು.

ರಾವಣನು ಲಂಕೆಗೆ ಬರುವ ವೇಳೆಗೆ, ಸೀತೆಯು ಭಯದಿಂದ ಮೂರ್ಛೆ ಹೊಂದಿದ್ದಳು. ಅವಳನ್ನು ತನ್ನ ಅಂತಃಪುರದಲ್ಲಿಳಿಸಿ, ರಾವಣನು ಅನೇಕ ದಾಸ ದಾಸಿಯರನ್ನು ಅವಳ ಸೇವೆಗೆ ನಿಲಿಸಿದನು. ತನ್ನ ಭೋಗಭಾಗ್ಯಗಳೆಲ್ಲವೂ ಸೀತೆಯ ಕಣ್ಣಿಗೆ ಕಟ್ಟುವಂತೆ ಅವಳನ್ನು ಉಪಚರಿಸಬೇಕೆಂದು ಆಜ್ಞಾಪಿಸಿ, ತನಗವಳು ವಶಳಾದಳೆಂದು ಭ್ರಮಿಸಿ ಹಿಗ್ಗಿದನು.

# ಸುಗ್ರೀವ ಸಖ್ಯ

ಲಕ್ಷ್ಮಣನು ಸೀತೆಯನ್ನು ಬಿಟ್ಟು ಅಗಲಕೂಡದೆಂದು ರಾಮನ ಆಜ್ಞೆಯಿತ್ತು. ಆದರೂ ಅತ್ತಿಗೆಯ ನಿಷ್ಠುರವಾದ ಮಾತುಗಳನ್ನು ಕೇಳಿ ಲಕ್ಷ್ಮಣನು ಅಣ್ಣನನ್ನು ಅರಸುತ್ತ ಹೋಗಬೇಕಾಯಿತು. ಮಾರೀಚನ ಮಾಯದ ಕೂಗನ್ನು ನಂಬಿ ಸೀತಾ ಲಕ್ಷ್ಮಣರು ಏನು ಮಾಡುವರೋ ಎಂದು ಹೆದರಿ ಓಡಿ ಬರುತ್ತಿದ್ದನು. ಅಣ್ಣ ತಮ್ಮಂದಿರಿಬ್ಬರೂ ಕೂಡಿದರು. ಅಣ್ಣನು ಕ್ಷೇಮವಾಗಿದ್ದುದು ಕಂಡು ಲಕ್ಷ್ಮಣನಿಗೆ ಸಂತೋಷವಾಯಿತು. ಸೀತೆ ಒಬ್ಬಳನ್ನೇ ಬಿಟ್ಟು ಲಕ್ಷ್ಮಣನು ಬಂದುದು ನೋಡಿ ರಾಮನ ಹೆದರಿಕೆ ಹೆಚ್ಚಿತು. ಸೀತೆಯನ್ನು ಬಿಟ್ಟು ಬಂದುದಕ್ಕೆ ಲಕ್ಷ್ಮಣನನ್ನು ನಿಂದಿಸಿದನು. ಇಬ್ಬರೂ ವೇಗವೇಗವಾಗಿ ಆಶ್ರಮಕ್ಕೆ ಬಂದರು. ಆಶ್ರಮದಲ್ಲಿ ಸೀತೆಯಿರಲಿಲ್ಲ ಆಶ್ರಮದ ಸುತ್ತ ಹುಡುಕಿದರು. ಸೀತೆಯಿರಲಿಲ್ಲ. ಸೀತೆಯಿಲ್ಲದುದು ಕಂಡು ಇಬ್ಬರ ದುಃಖ ಹೇಳತೀರದು. ರಾಮನಿಗಂತೂ ಹುಚ್ಚು ಹಿಡಿದ ಹಾಗಾಗಿತ್ತು. ಕಂಡಕಂಡ ಗಿಡ ಮರಗಳನ್ನು, ಮೃಗ ಪಕ್ಷಿಗಳನ್ನು, ಗಾಳಿ ನೀರುಗಳನ್ನು ಕೇಳಿದನು—ಸೀತೆ ಎಲ್ಲಿ ಎಂದು. ಹುಡುಕಿ ಹುಡುಕಿ ಗೋಳಾಡಿ, ಕಡೆಗೆ ಆಶ್ರಮದಿಂದಾಚೆ ಸೀತೆಯನ್ನು ಅರಸಬೇಕೆಂದು ಇಬ್ಬರೂ ಕಾಡಿನಲ್ಲಿ ಮುಂದೆ ಹೋದರು.

ಹೀಗೆ ಹುಡುಕುತ್ತ ಹೋದವರು ದಾರಿಯಲ್ಲಿ ಜಟಾಯು ಬಿದ್ದಿದ್ದ ಕಡೆಗೆ ಬಂದರು. ಜಟಾಯು ಅಲುಗಾಡದೆ ಬಿದ್ದಿತ್ತು. ಅದರ ಮೈಗೆಲ್ಲ ರಕ್ತ ಮೆತ್ತಿಕೊಂಡಿತ್ತು. ರಾಮನು ಅದನ್ನು ನೋಡಿದನು.

“ಲಕ್ಷ್ಮಣ! ಇದೊ ನೋಡು. ಈ ರಾಕ್ಷಸನೇ ಸೀತೆಯನ್ನು ಕೊಂದು ತಿಂದಿರುವನು. ಮೈ ಮೇಲಿನ ರಕ್ತ ಕೂಡ ಇನ್ನೂ ಆರಿಲ್ಲ. ಇವನನ್ನು ಈಗಲೇ ಧ್ವಂಸಮಾಡುವೆನು” ಎಂದು ಬಾಣ ಎಳೆದನು.

ರಾಮನ ಮಾತು ಕೇಳಿ ಜಟಾಯು ಕಣ್ಣು ತೆರೆಯಿತು. ರಾವಣನ ಪೆಟ್ಟಿಗೆ ಅದು ಸಾಯುವ ಸ್ಥಿತಿಗಿಳಿದಿತ್ತು. ಆದರೂ, ರಾವಣನು ಮಾಡಿದ ಅತ್ಯಾಚಾರವನ್ನು ರಾಮನಿಗೆ ತಿಳಿಸಬೇಕೆಂದು ಅವನು ಬರುವ ವರೆಗೂ ಜೀವ ಹಿಡಿದುಕೊಂಡಿತ್ತು.

"ರಾಮಾ! ನಾನು ರಾಕ್ಷಸನಲ್ಲ. ಜಟಾಯು. ನಿನ್ನ ತಂದೆಯ ಸ್ನೇಹಿತ. ನೀವು ಆಶ್ರಮದಲ್ಲಿ ಇಲ್ಲದ ವೇಳೆಯನ್ನು ಕಾಯ್ದು, ರಾವಣನು ಸೀತೆಯನ್ನು ಕದ್ದು ಹೋದನು. ತಡೆಯಲು ಹೋದ ನನಗೆ ಈ ಗತಿಯಾಯಿತು" ಎಂದು ಹೇಳುತ್ತ ಜಟಾಯು ಪ್ರಾಣಬಿಟ್ಟನು.

ರಾಮನು ಆ ಮಾತು ಕೇಳಿದನು. ಜಟಾಯುವಿನ ಕಾಲಿಗೆ ನಮಸ್ಕರಿಸಿ ತಾನಾಡಿದ ನಿಷ್ಠುರ ವಚನಕ್ಕೆ ಅದರ ಕ್ಷಮೆ ಬೇಡಿದನು. ರಾಮನಿಗೆ ಜಟಾಯುವಿನಲ್ಲಿ ಪಿತೃಭಾವನೆಯಿತ್ತು. ಅದಕ್ಕೆ ಮಾಡಬೇಕಾದ ಅಪರ ಕರ್ಮಗಳನ್ನೆಲ್ಲ ಮಾಡಿ, ಸೀತೆಯನ್ನು ಹುಡುಕುತ್ತ ಮುಂದೆ ಹೋದನು.

ರಾಮ ಲಕ್ಷ್ಮಣರು ಮುಂದೆ ಹೋದರು. ಸೀತೆಯನ್ನು ರಾವಣನು ಕದ್ದು ಒಯ್ದನೆಂದು ಅವರಿಗೆ ತಿಳಿಯಿತು. ಆದರೆ ರಾವಣನ ವಾಸಸ್ಥಾನವನ್ನು ತಿಳಿಸುವ ಮೊದಲೆ ಜಟಾಯು ಪ್ರಾಣ ಬಿಟ್ಟಿತು. ಆದ್ದರಿಂದ ಹೋಗಬೇಕಾದ ಸ್ಥಳದ ಅರಿವೇ ಇಲ್ಲದೆ ರಾಮ ಲಕ್ಷ್ಮಣರು ಕಾಲು ಬಂದ ಕಡೆಗೆ ನಡೆದರು.

ದಾರಿಯಿಲ್ಲದ ಕಾಡಿನಲ್ಲಿ ದಾರಿ ಮಾಡಿಕೊಂಡು ಹೋಗುತ್ತಿರುವಾಗ ಒಂದು ಘೋರವಾದ ಗರ್ಜನೆಯು ಕೇಳಿಬಂತು. ಬಿರುಗಾಳಿಯಂತಹ ಗಾಳಿ ಅವರೆದುರಾಗಿ ಬೀಸಿತು. ಭೂಮಿ ನಡುಗಿತು. ತುಸು ವೇಳೆಯಲ್ಲಿಯೇ ಒಬ್ಬ ರಾಕ್ಷಸನು ಬಂದನು. ಅವನಿಗೆ ಕತ್ತು ಇರಲಿಲ್ಲ, ತಲೆ ಇರಲಿಲ್ಲ. ಇದ್ದದು ಬರಿಯ ಮುಂಡ ಮಾತ್ರ, ಮಾಂಸದ ಮುದ್ದೆ ಎದೆಯ ಮಧ್ಯ ಒಂದು ಬಿರುಗಣ್ಣು. ಹೊಟ್ಟೆಯ ನಡುವೆ ಒಂದು ಗವಿ ಬಾಯಿ. ಉದ್ದುದ್ದವಾದ ಅವನ ಎರಡು ಕೈಗಳು ಸಿಕ್ಕಿದುದನ್ನು ಬಾಚಿ ಬಾಯಿಗೆ ಹಾಕಿಕೊಳ್ಳುತ್ತಿದ್ದವು. ಅವನೇ ಕಬಂಧನೆಂಬ ರಾಕ್ಷಸನು ಅವನು ತನ್ನ ಕಾಡಿಗೆ ಬಂದ ರಾಮ ಲಕ್ಷ್ಮಣರನ್ನು ಹಿಡಿದು ನುಂಗಲು ಎತ್ತಿದನು. ರಾಮ ಲಕ್ಷ್ಮಣನು ಅವನಿಗೆ ಹೆದರಲಿಲ್ಲ. ತಲೆಯಿಲ್ಲದವನನ್ನು ಕೊಲ್ಲುವುದು ಹೇಗೆಂದು ಬಗೆದು, ಅವನ ಎರಡೂ ಕೈಗಳನ್ನು ಕಡಿದರು ಕೈ ಕಡಿದ ಕ್ಷಣ ಕಬಂಧನು ದೊಪ್ಪನೆ ಕೆಡೆದು ತನ್ನನ್ನು ಕೊಂದವರು ಯಾರೆಂದು ಆರ್ಭಟಿಸಿದನು. ತಾನು ರಾಮ ಲಕ್ಷ್ಮಣರ ಕೈಲಿ ಹತನಾದೆನೆಂಬುದು ತಿಳಿದು ಕಬಂಧನ ಕಣ್ಣಲ್ಲಿ ಆನಂದಬಾಷ್ಪ ತುಳುಕಿತು.

ಆ ಕಬಂಧನೆಂಬ ರಾಕ್ಷಸನು ಹಿಂದಿನ ಜನ್ಮದಲ್ಲಿ ಗಂಧರ್ವನಾಗಿದ್ದನು. ಇಂದ್ರನ ಶಾಪದಿಂದ ರಾಕ್ಷಸನಾಗಿ ಹುಟ್ಟಿ ಕಾಡಿನಲ್ಲಿ ಅಲೆಯುತ್ತಿದ್ದನು.

ರಾಮ ಲಕ್ಷ್ಮಣರು ಬಂದು ಅವನನ್ನು ಗೆದ್ದು, ಬದುಕಿದ್ದಂತೆಯೇ ಸುಟ್ಟಾಗ ಶಾಪವಿಮೋಚನೆಯಾಗುವುದೆಂದೂ ಅವನಿಗೆ ಅನುಗ್ರಹವಿತ್ತು. ಅದರಂತೆ ತನ್ನನ್ನು ಚಿತೆಯ ಮೇಲಿಟ್ಟು ಸುಡಬೇಕೆಂದು ಕಬಂಧನು ರಾಮನನ್ನು ಬೇಡಿದನು. ಆದರೆ, ರಾವಣನ ವಾಸಸ್ಥಾನವನ್ನು ತಿಳಿಸುವ ವರೆಗೂ ಅವನಿಗೆ ಗತಿ ತೋರಿಸುವುದಿಲ್ಲವೆಂದು ರಾಮನು ಹೇಳಿದನು. ತಲೆಯಿಲ್ಲದ ಕಬಂಧನಿಗೆ ಏನೊಂದೂ ನೆನಪಾಗುವಂತಿಲ್ಲ. ಮುನ್ನಿನ ಜನ್ಮ ಬಂದರೆ ಜ್ಞಾಪಕವಾಗಬಹುದೋ ಏನೊ!

ರಾಮ ಲಕ್ಷ್ಮಣರು ಒಂದು ದೊಡ್ಡ ಚಿತೆಯನ್ನು ಎತ್ತಿದರು. ಕಬಂಧನನ್ನು ಅದರ ಮೇಲಿಟ್ಟು ಉರಿ ತಾಗಿಸಿದರು. ಕಬಂಧನು ಬೆಣ್ಣೆಯಂತೆ ಕರಗಿ ಹೋದನು. ಅವನು ಕರಗಿದುದೇ ತಡ, ಆ ಚಿತೆಯಿಂದ ಶಾಪವಿಮುಕ್ತನಾದ ಗಂಧರ್ವನು ಎದ್ದು, ಗಗನಮಾರ್ಗವನ್ನು ಹಿಡಿದು ಹೊರಟನು.

ಹೊರಡುವಾಗ "ರಾಮ! ಋಷ್ಯಮೂಕ ಪರ್ವತಕ್ಕೆ ಹೋಗು. ಅಲ್ಲಿಯ ಕಪಿಗಳ ಅರಸನಾದ ಸುಗ್ರೀವನ ಸ್ನೇಹಮಾಡು. ಮಹಾಪರಾಕ್ರಮಿಯೂ ಸತ್ಯವಂತನೂ ಮಹಾತ್ಮನೂ ಆದ ಅವನು ನಿನಗೆ ನೆರವಾಗುವನು. ಸೀತೆಯು ಸ್ವರ್ಗ ಮರ್ತ್ಯ ಪಾತಾಳಗಳಲ್ಲಿ ಎಲ್ಲಿದ್ದರೂ, ಅಲ್ಲಿಂದ ಅವಳನ್ನು ಉದ್ಧರಿಸಿ ತಂದು ನಿನಗೊಪ್ಪಿಸುವನು" ಎಂದುಸುರಿ ಮಾಯವಾದನು.

ರಾಮ ಲಕ್ಷ್ಮಣರು ಋಷ್ಯಮೂಕಕ್ಕೆ ಹೊರಟರು.

ದಾರಿಯಲ್ಲಿ ಪಂಪಾಸರೋವರ ಸಿಕ್ಕಿತು. ಅಲ್ಲಿಯ ಜಲದಲ್ಲಿ ಸೀತಾರಾಮರು ಎಷ್ಟೋ ಬಾರಿ ಒಟ್ಟಿಗೆ ಸ್ನಾನಮಾಡಿದ್ದರು. ಅದರ ತೀರದಲ್ಲಿ ಬಹುಸಲ ವಿಹರಿಸಿ ವಿಶ್ರಮಿಸಿಕೊಂಡಿದ್ದರು. ಆ ಸರಸ್ಸಿನ ನೀರು, ಅಲ್ಲಿಯ ಹೂ, ಆ ಸುಂದರ ಪ್ರದೇಶದ ಸುತ್ತಮುತ್ತಲಿನ ಗಿಡಗಳು, ಅಲ್ಲಿಯ ಹಕ್ಕಿಗಳು ಎಲ್ಲವೂ ಸೀತೆಯ ನೆನಪನ್ನೇ ಮರುಕೊಳಿಸುತ್ತಿದ್ದುವು. ರಾಮನಿಗೆ ಆ ಸ್ಥಳ ಬಿಟ್ಟು ಹೋಗಲು ಮನಸೇ ಬಾರದು. ಆದರೂ ಲಕ್ಷ್ಮಣನ ಬಲವಂತಕ್ಕೆ ತಡೆಯಲಾರದೆ ಕಾಲೆಳೆದುಕೊಂಡು ಹೊರಟನು.

ಅವರಿಬ್ಬರೂ ಋಷ್ಯಮೂಕಪರ್ವತವನ್ನು ಸಮೀಪಿಸುವುದು ಅಲ್ಲಿಯ ಕಪಿಗಳ ಕಣ್ಣಿಗೆ ಬಿತ್ತು. ಎಲ್ಲ ಕಪಿಗಳೂ ಹೆದರಿ ಚೆಲ್ಲಾಪಿಲ್ಲಿಯಾದುವು. ಅವುಗಳ ಹೆದರಿಕೆಗೆ ಕಾರಣವಿಲ್ಲದೆ ಇರಲಿಲ್ಲ. ಋಷ್ಯಮೂಕದಲ್ಲಿ ಆ ಕೆಲವು

ಕಪಿಗಳು ಮಾತ್ರವಲ್ಲದೆ ಅವುಗಳ ಅರಸನಾದ ಸುಗ್ರೀವನೂ ಇದ್ದನು. ಸುಗ್ರೀವನು ತನ್ನ ಅಣ್ಣನಾದ ವಾಲಿಗೆ ಸೋತು, ತಮ್ಮ ರಾಜಧಾನಿಯಾದ ಕಿಷ್ಕಿಂಧೆಯಿಂದ ತಪ್ಪಿಸಿಕೊಂಡು ಬಂದು, ಋಷ್ಯಮೂಕದಲ್ಲಿ ಮಿತ ಪರಿವಾರದೊಡನೆ ವಾಸವಾಗಿದ್ದನು. ಆತನಿಗೂ ಅವನ ಕಪಿಗಳಿಗೂ ವಾಲಿಯ ಭಯ ಮೂರು ವೇಳೆಯೂ ಇತ್ತು. ಹೀಗಿರುವಾಗ ರಾಮ ಲಕ್ಷ್ಮಣರು ಅಲ್ಲಿಗೆ ಬಂದರು. ಅವರದು ತಾಪಸವೇಷವಾದರೂ ಅವರು ಬಿಲ್ಲು ಬಾಣಗಳನ್ನೂ ಕತ್ತಿಯನ್ನೂ ಹಿಡಿದಿದ್ದರು. ಸುಗ್ರೀವನನ್ನು ಸೆರೆಹಿಡಿದು ತರಲು ವಾಲಿಯು ಕಳುಹಿಸಿದ ಯೋಧರಿವರಿರಬಹುದೆಂದು ಭ್ರಮಿಸಿ, ಆ ವಾನರಸಮೂಹವು ಬೆಚ್ಚಿ ಓಡಿತು.

ಎಲ್ಲಾ ಕಪಿಗಳೂ ಓಡಿದರೂ, ಆ ಗುಂಪಿನಲ್ಲಿ ಅತಿ ಬುದ್ಧಿವಂತನಾದ ಹನುಮಂತನು ಮಾತ್ರ ಓಡಲಿಲ್ಲ. ವಿಚಾರಿಸದೆ ಕಣ್ಣುಮುಚ್ಚಿಕೊಂಡು ಹೆದರಿ ಓಡುವುದು ಅವನ ಸ್ವಭಾವವಲ್ಲ. ಬಂದವರು ಯಾರೆಂದು ತಿಳಿಯಲು ಕುತೂಹಲಿಯಾಗಿ ಅವನು ಬ್ರಾಹ್ಮಣನ ವೇಷ ಹಾಕಿಕೊಂಡು ರಾಮ ಲಕ್ಷ್ಮಣರ ಬಳಿ ಬಂದನು. ಯಥಾಯೋಗ್ಯವಾದ ಕುಶಲಪ್ರಶ್ನೆಗಳಿಂದ ಅವರನ್ನು ಮಾತನಾಡಿಸಿದನು. ರಾಮಲಕ್ಷ್ಮಣರಿಗೆ ಅವನ ಮಾತಿನ ಧೋರಣೆ ಕಂಡು ಅತ್ಯಾಶ್ಚರ್ಯವಾಯಿತು. ಅವನು ಮಾತನಾಡಿದುದು ಅಚ್ಚ ಸಂಸ್ಕೃತದಲ್ಲಿ. ಒಂದು ವ್ಯಾಕರಣ ದೋಷವಿಲ್ಲ, ನಯವಿಲ್ಲದ ಮಾತಿಲ್ಲ. ಕೇಳಿದವರಿಗೆ ಕರ್ಣಾನಂದವಾಗಿತ್ತು ಹನುಮಂತನ ಮಾತು. ಅವನ ಮಾತು ಕೇಳಿದ ರಾಮನಿಗೆ ತಾನೂ ಅವನೂ ಆತ್ಮೀಯರೆಂಬ ಭಾವನೆ ಜನಿಸಿತು. ಆ ಭಾವನೆ ಬಂದುದೆ ಕಾರಣವಾಗಿ, ರಾಮನು ತಾವಾರೆಂಬುದನ್ನೂ ತಮಗೊದಗಿದ ನಷ್ಟವನ್ನೂ ವಿವರಿಸಿ, ತನ್ನ ದುಃಖವನ್ನೆಲ್ಲ ತೋಡಿಕೊಂಡನು.

ರಾಮನ ಮಾತು ಕೇಳುತ್ತ, ಹನುಮಂತನಿಗೆ ಒಂದು ಯೋಚನೆ ಬಂತು. ಇತ್ತ ರಾಮನು ಸೀತೆಯನ್ನು ಹುಡುಕುವದಕ್ಕೆ ಸುಗ್ರೀವನ ಸಹಾಯವನ್ನು ಅಪೇಕ್ಷಿಸುತ್ತಾನೆ. ಅತ್ತ ಸುಗ್ರೀವನು ರಾಜ್ಯಭ್ರಷ್ಟನಾಗಿ ವಾಲಿಗೆ ಅಂಜಿ ಅವಿತುಕೊಂಡಿದ್ದಾನೆ. ಮಹಾ ಪರಾಕ್ರಮಿಗಳಾದ ರಾಮ ಲಕ್ಷ್ಮಣರು ಸಹಾಯಮಾಡಿದರೆ, ತನ್ನ ಸ್ವಾಮಿಯಾದ ಸುಗ್ರೀವನು ವಾಲಿಯನ್ನು ಕೊಂದು ರಾಜನಾಗಬಹುದು. ಆ ಉಪಕಾರಕ್ಕೆ ಬದಲಾಗಿ

ಸುಗ್ರೀವನು ಸೀತೆಯನ್ನು ಅರಸಲು ಸಹಾಯ ಮಾಡಬಹುದು. ಅದರಿಂದ ಇಬ್ಬರಿಗೂ ಲೇಸಾದೀತು.

ಹನುಮಂತನಿಗೆ ತನ್ನ ಯೋಚನೆಯು ಸೂಕ್ತವಾಗಿ ಕಂಡು ಬಂದಿತು. ರಾಮಲಕ್ಷ್ಮರು ಸುಗ್ರೀವನಿಗೆ ಕೇಡೆಣಿಸಿ ಬಂದವರಲ್ಲವೆಂದು ಅವನಿಗೆ ತಿಳಿದು ಬಂದಿತ್ತು. ಹೆದರ ಬೇಡಿರೆಂದು ರಾಮಲಕ್ಷ್ಮಣರಿಗೆ ಹೇಳುತ್ತ ತನ್ನ ಮುನ್ನಿನ ಕಪಿರೂಪವನ್ನು ತಾಳಿದನು ಅವರಿಬ್ಬರನ್ನೂ ಹೆಗಲ ಮೇಲೇರಿಸಿಕೊಂಡು, ಸುಗ್ರೀವನಿದ್ದ ಪರ್ವತಶಿಖರಕ್ಕೆ ಹಾರಿದನು. ಅವರನ್ನು ಇಳಿಸಿ, ಸುಗ್ರೀವನಿಗೆ ಅವರ ಪರಿಚಯ ಮಾಡಿಕೊಟ್ಟನು. ರಾಮಲಕ್ಷ್ಮಣರ ವನವಾಸ ಮೊದಲಾಗಿ ಸೀತಾಹರಣದ ಕತೆಯೆಲ್ಲವನ್ನೂ ಸುಗ್ರೀವನು ಕೇಳಿದನು. ಸುಗ್ರೀವನನ್ನು ಹೊಡೆದೋಡಿಸಿ ಅವನ ರಾಜ್ಯವನ್ನು ವಾಲಿಯು ಅನುಭವಿಸುತ್ತಿರುವುದು ರಾಮನಿಗೆ ತಿಳಿಯಿತು. ಒಬ್ಬರ ಸ್ಥಿತಿ ಕಂಡು ಒಬ್ಬರಿಗೆ ಮರುಕ ಹುಟ್ಟಿತು. ಹನುಮಂತನ ಸಾಚಿವ್ಯವೆ ಕಾರಣವಾಗಿ, ರಾಮ ಸುಗ್ರೀವರಿಬ್ಬರೂ ಪರಸ್ಪರ ನೆರವಾಗಲು ಒಪ್ಪಿದರು. ವಾಲಿಯನ್ನು ಕೊಂದು, ಕಿಷ್ಕಿಂಧೆಯಲ್ಲಿ ಸುಗ್ರೀವನಿಗೆ ಪಟ್ಟ ಕಟ್ಟುವುದಾಗಿ ರಾಮನು ಮಾತುಕೊಟ್ಟನು. ಪ್ರತಿಯಾಗಿ ಸೀತೆಯನ್ನು ಹುಡುಕಿ ತರಲು ಎಲ್ಲಾ ಪ್ರಯತ್ನಗಳನ್ನೂ ಮಾಡವುದಾಗಿ ಸುಗ್ರೀವನು ರಾಮನಿಗೆ ವಾಗ್ದಾನ ಮಾಡಿದನು. ಅದೆ ಮಾತೆ ಹಿಡಿದು ಇಬ್ಬರೂ ಅಗ್ನಿಸಾಕ್ಷಿಯಾಗಿ ತಮ್ಮ ಸ್ನೇಹಕ್ಕೆ ಬೆಸುಗೆ ಹೊಯ್ದರು

ಆದಾಗಿ, ಸ್ನೇಹಿತರಿಬ್ಬರೂ ಮಾತನಾಡುತ್ತ ಕುಳಿತರು. ಆಗ ಸುಗ್ರೀವನಿಗೆ ಹೊಳೆಯಿತು—ಹಿಂದೆ ಗಗನ ಮಾರ್ಗವಾಗಿ ವಿಮಾನದಲ್ಲಿ ಹೋಗುತ್ತ ಆಭರಣಗಳನ್ನು ಕೆಳಗೆಸೆದವಳು ಸೀತೆಯೇ ಇರಬೇಕೆಂದು. ತತ್‌ಕ್ಷಣವೇ ಅವುಗಳನ್ನು ತಂದು ರಾಮನಿಗೆ ತೋರಿಸಿದನು.

ರಾಮನು ಅವನ್ನು ನೋಡಿದನು. ಹೌದು ಅವೇ, ಸೀತೆಯವೇ! ಅದು ಕಂಡು ರಾಮನ ಕಣ್ಣಿನಲ್ಲಿ ನೀರು ಬಂತು. ಲಕ್ಷ್ಮಣನ ಕಡೆ ತಿರುಗಿ, ಅವನಿಗೆ ಅದು ತೋರಿಸಿ "ಇವು ಸೀತೆಯುವೆ ಅಲ್ಲವೆ, ಲಕ್ಷ್ಮಣ?" ಎಂದನು.

ಲಕ್ಷ್ಮಣನು ಎಂದೂ ಅತ್ತಿಗೆಯ ಮುಖ ದೃಷ್ಟಿಸಿ ನೋಡಿದವನಲ್ಲ. ಪಾಪ! ಅವಳ ಆಭರಣಗಳನ್ನು ಅವನು ಹೇಗೆ ಗುರುತಿಸಿಯಾನು! ಪ್ರತಿದಿನ ಕಾಲಿಗೆರಗುತ್ತಿದ್ದನಾಗಿ, ಅವಳ ಪಾದ ಮಾತ್ರ ಅವನ ಕಣ್ಣಿಗೆ ಕಟ್ಟಿದಂತಿತ್ತು.

ಅಂತೂ ಸೀತೆಯನ್ನು ರಾವಣನೇ ಕೊಂಡುಯ್ದನೆಂಬುದು ಖಚಿತ ವಾಯಿತು. ಇನ್ನು ಹೋಗಿ ತರುವುದೊಂದೇ ಉಳಿದುದು. ಆದರೆ ರಾವಣನು ಇರುವ ಎಡೆ ಮಾತ್ರ ಯಾರಿಗೂ ತಿಳಿಯದು ಸುಗ್ರೀವನಿಗೂ ಗೊತ್ತಿಲ್ಲ. ಆದರೆ ತನ್ನ ವಾನರರನ್ನು ದಿಕ್ಕುದಿಕ್ಕಿಗೂ ಕಳುಹಿಸಿ ಸೀತಾ ವೃತ್ತಾಂತವನ್ನು ಶೀಘ್ರವಾಗಿಯೇ ತರಿಸುವುದಾಗಿ ಭರವಸೆ ಕೊಟ್ಟನು. ಆ ಮಧ್ಯದಲ್ಲಿ ರಾಮನು ತನಗೆ ಸಹಾಯಮಾಡಬೇಕು, ವಾಲಿಯನ್ನು ಕೊಲ್ಲಲು ನೆರವಾಗಿ ತನಗೆ ಪಟ್ಟ ಕಟ್ಟಬೇಕು

---

# ಸೀತಾನ್ವೇಷಣ ಸನ್ನಾಹ

ರಾಮನು ತಾನು ಕೊಟ್ಟ ಮಾತು ಉಳಿಸಿಕೊಂಡನು. ಅವನು ಪ್ರೇರಿಸಿದಂತೆ ಸುಗ್ರೀವನು ಕಿಷ್ಕಿಂಧೆಗೆ ಹೋಗಿ ವಾಲಿಯನ್ನು ಯುದ್ಧಕ್ಕೆ ಕರೆದನು ವಾಲಿ ಸುಗ್ರೀವರ ಯುದ್ಧದಲ್ಲಿ ರಾಮನು ತಾನೂ ಭಾಗಿಯಾದನು. ವಾಲಿಯು ರಾಮನ ಅಮೋಘವಾದ ಬಾಣಕ್ಕೆ ಸಿಕ್ಕಿ ಹತನಾದನು. ಸುಗ್ರೀವನು ಕಿಷ್ಕಿಂಧೆಯ ಸಿಂಹಾಸನವನ್ನು ಏರಿದನು.

ಸುಗ್ರೀವನು ರಾಜ್ಯಸುಖ ಸವಿದು ಬಹು ದಿನವಾಗಿತ್ತು. ಹೀಗೆ ಒಮ್ಮೆಯೇ ಕಳೆದುಕೊಂಡುದನ್ನು ಪಡೆದ ಸಂಭ್ರಮದಲ್ಲಿ ಅವನಿಗೆ ಮೈಮೇಲೆ ಎಚ್ಚರವೇ ಇರಲಿಲ್ಲ. ಸೀತೆಯನ್ನು ಹುಡುಕಿಸುವುದಾಗಿ ಮಾಡಿದ ವಾಗ್ದಾನವು ಅವನ ನೆನಪಿನಿಂದ ಜಾರಿತ್ತು. ಸುಗ್ರೀವನು ತನ್ನ ಭೋಗ ವಿಲಾಸಗಳಲ್ಲಿ ಮುಳುಗಿದ್ದನು. ಆ ವೇಳೆಗೆ ವರ್ಷಾಕಾಲ ಬಂತು. ಮಳೆಗಾಲದಲ್ಲಿ ಯಾರೂ ಹೊರಗೆ ಹೊರಡುವಂತಿರಲಿಲ್ಲ. ಮಳೆಗಾಲವೂ ಕಳೆಯಿತು. ಶರತ್ಕಾಲ ಬಂತು. ಇನ್ನೂ ಸುಗ್ರೀವನು ಕಾಮಾಸಕ್ತನಾಗಿ ಅಂತಃಪುರವನ್ನು ಬಿಟ್ಟು ಬರವೊಲ್ಲದಾದನು. ಅವನಿಗೆ ರಾಮಕಾರ್ಯದ ನೆನಪೇ ಇದ್ದಂತಿರಲಿಲ್ಲ.

ಅದುವರೆಗೆ ರಾಮನು ಒಂದು ಪರ್ವತಗುಹೆಯಲ್ಲಿ ವಾಸಿಸುತ್ತ ಏಕಾಂತವಾಗಿದ್ದನು. ಸೀತೆಯ ವಿರಹವು ಅವನನ್ನು ಬಹು ಬಾಧಿಸುತ್ತಿತ್ತು. ಸುಗ್ರೀವನು ತನ್ನ ಕರ್ತವ್ಯವನ್ನೇ ಮರೆತ ಹಾಗಿತ್ತು. ಕಾಯ್ದು ಕಾಯ್ದು, ಸುಗ್ರೀವನ ಸಹಾಯ ಬರದಿದ್ದುದು ಕಂಡು, ರಾಮನಿಗೆ ಕೋಪ ಬಂತು. ಅಣ್ಣನು ದುಃಖಪಡುವುದನ್ನು ಕಂಡು, ಲಕ್ಷ್ಮಣನೂ ಕೆಂಡವಾದನು. ಬಿಲ್ಲು ಬಾಣಗಳನ್ನು ಹಿಡಿದು, ರಾಮನ ಅಪ್ಪಣೆ ಪಡೆದು, ಸುಗ್ರೀವನನ್ನು ಕಾಣಲು ನಡೆದನು. ಲಕ್ಷ್ಮಣನು ಕೋಪಗೊಂಡು ಬರುತ್ತಿರುವುದು ಸುಗ್ರೀವನ ಹೆಂಡತಿ ಮಕ್ಕಳಿಗೆ ತಿಳಿಯಿತು. ಅದು ಹನುಮಂತನಿಗೂ ಗೊತ್ತಾಯಿತು. ಎಲ್ಲರೂ ಬೇಗ ಹೋಗಿ ಅವನು ಮುಳುಗಿದ್ದ ಸುಖದಿಂದ ಸುಗ್ರೀವನನ್ನು ಬೇಗ ಎಬ್ಬಿಸಿದರು. ಇತ್ತ ಬಂದು ಲಕ್ಷ್ಮಣನನ್ನು ಸಮಾಧಾನಪಡಿಸಿ ಸುಗ್ರೀವನ ಬಳಿಗೆ ಕರೆತಂದರು.

ಸುಗ್ರೀವನಿಗೆ ಆ ವೇಳೆಗೆ ಜ್ಞಾನ ಬಂದಿತ್ತು. ತನ್ನ ಕೃತಘ್ನತೆಗೆ ನಾಚಿ, ರಾಮ ಲಕ್ಷ್ಮಣರ ಕ್ಷಮೆ ಬೇಡಿದನು. ಹಿಂದಿನ ಪ್ರಮತ್ತತೆಯನ್ನು ಮುಚ್ಚಿ

ಮೀರುವ ರೀತಿಯಲ್ಲಿ ಸೀತಾನ್ವೇಷಣ ಸನ್ನಾಹದ ಬಗೆಗೆ ಬಹು ಚಟುವಟಿಕೆ ತೋರಿಸಿದನು. ಅವನ ಕರೆಗೆ ಅನೇಕಾನೇಕ ವಾನರ ವೀರರು ಸಿದ್ಧರಾದರು. ಎಲ್ಲರೂ ಸ್ವಾಮಿಕಾರ್ಯ ಧುರಂಧರರೆ. ಜೊತೆಗೆ ಅನೇಕ ಕರಡಿಗಳು ತಮ್ಮ ಸ್ವಾಮಿಯಾದ ಜಾಂಬವಂತನ ಹಿಂದೆ ಬಂದು ನಿಂತುವು. ಅವು ಕೂಡ ಸೀತೆಯನ್ನು ಹುಡುಕಲು ಜೀವ ಮೀಸಲು ಮಾಡಿ ಮುಂದೆ ಬಂದುವು. ಆ ಎಲ್ಲ ಸೇನೆಯು ಬಂದು ನೆರೆಯಿತು. ಸುಗ್ರೀವನು ಅವುಗಳನ್ನು ನಾಲ್ಕು ದಿಕ್ಕಿಗೆ ಹೋಗ ಹೇಳಿ ಕಳುಹಿಸಿದನು. ಸೀತೆಯನ್ನು ಕಂಡಲ್ಲದೆ ಹಿಂದಿರುಗುವುದಿಲ್ಲವೆಂದು ಹೇಳುತ್ತ ಆ ಮಹಾ ಸೇನೆಯು ಕಿಷ್ಕಿಂಧೆಯನ್ನು ಹಿಂದೆ ಬಿಟ್ಟು ಹೋಯಿತು. ಹೋದ ದೂತರು ಸುದ್ದಿ ತರುವುದನ್ನೆ ಎದುರು ನೋಡುತ್ತ, ರಾಮ ಲಕ್ಷ್ಮಣರು ಅಲ್ಲಿಯೆ ನಿಂತರು.

ಸೀತೆಯನ್ನು ಹುಡುಕಲು ಹೋದ ಕಪಿಗಳಿಗೆಲ್ಲ ಸುಗ್ರೀವನು ಒಂದು ತಿಂಗಳ ಅವಧಿ ಕೊಟ್ಟಿದ್ದನು. ಅನೇಕ ಕಪಿಗಳು ತಮ್ಮ ಕಾರ್ಯದಲ್ಲಿ ಕೃತಕೃತ್ಯರಾಗದೆ ಗಡು ಮುಗಿಯುವ ವೇಳೆಗೆ ಹೋದಂತೆ ಹಿಂದಿರುಗಿದರು. ಆ ಹೊರಟವರಲ್ಲಿ ಹನುಮಂತನೇ ಮೊದಲಾದ ಹಲವರು ಮಾತ್ರ ಇನ್ನೂ ಹಿಂದಿರುಗಿರಲಿಲ್ಲ.

ಹನುಮದಾದಿಗಳು ದಕ್ಷಿಣಕ್ಕೆ ಹೊರಟವರು ಬಹು ಜಾಗರೂಕತೆಯಿಂದ ಅರಸುತ್ತ ಸಾಗಿದರು. ಹಾದಿಯಲ್ಲಿ ತಮ್ಮನ್ನು ಎದುರಿಸಿದ ರಾಕ್ಷಸನೊಬ್ಬನನ್ನು ರಾವಣನೆಂದೇ ಭ್ರಮಿಸಿ ಕೊಂದರು. ಅವನು ರಾವಣನಲ್ಲವೆಂದು ತಿಳಿದ ಮೇಲೆ ಮುಂದುವರಿದರು. ಮುಂದೆ ಒಂದು ಬಿಲ ಸಿಕ್ಕಿತು. ಋಕ್ಷಬಿಲವೆಂಬ ಆ ಬಿಲದಲ್ಲಿ ಪ್ರವೇಶಿಸಿದವರು ಹೊರಗೆಯೆ ಬರಲಾಗುತ್ತಿರಲಿಲ್ಲ. ಮಯನೆಂಬ ರಾಕ್ಷಸನು ಆ ಬಿಲದಲ್ಲಿ ಬಹು ಧನ ಮಡಗಿದ್ದನು. ಸ್ವಯಂಪ್ರಭೆಯೆಂಬ ಧರ್ಮಚಾರಿಣಿಯು ಅಲ್ಲಿಯೆ ವಾಸಮಾಡುತ್ತ ಆ ಧನವನ್ನು ನೋಡಿಕೊಳ್ಳುತ್ತಿದ್ದಳು. ಇದೆಲ್ಲ ವಿಷಯಗಳು ಆ ವಾನರರಿಗೆ ಗೊತ್ತಿರಲಿಲ್ಲ. ಸೀತೆಯನ್ನು ಹುಡುಕುವುದೊಂದೇ ಅವರ ಗುರಿ ಅದೆ ಅಭಿಪ್ರಾಯದಿಂದ ಆ ಗುಹೆಯೊಳಗೂ ನುಗ್ಗಿದರು. ನುಗ್ಗುವುದು ನುಗ್ಗಿದರು, ಹೊರಗೆ ಬರಲು ದಾರಿಯರಿಯರು. ಆ ಋಕ್ಷಬಿಲದಲ್ಲಿಯೇ ಬಹು ವೇಳೆ ವ್ಯರ್ಥವಾಯಿತು. ಕಡೆಗೆ ಸ್ವಯಂಪ್ರಭೆಯ ಕೃಪೆಯಿಂದ ಋಕ್ಷಬಿಲವನ್ನು ಬಿಟ್ಟು ಹೊರಗಡೆ ಬಂದರು. ಅವರ ಕಾಲ ಬಳಿಯಲ್ಲಿಯೆ ಸಮುದ್ರವು ಮೊರೆಯುತ್ತಿತ್ತು.

ಆ ವೇಳೆಗೆ ಸುಗ್ರೀವನು ನಿಯಮಿಸಿದ್ದ ಕಾಲ ಮುಗಿಯುತ್ತ ಬಂದಿತ್ತು. ವಾನರರೂ ಸೀತೆಗಾಗಿ ಹುಡುಕಿ ಸಾಕಾಗಿದ್ದರು. ಸೀತೆ ಸಿಕ್ಕಲಿಲ್ಲ. ಸೀತೆ ಯಿಲ್ಲದೆ ಬರಿಗೈಯಲ್ಲಿ ಹಿಂದೆ ಹೋಗಲು ಯಾರಿಗೂ ಮುಖವಿಲ್ಲ. ಹಿಂದಿರುಗದೆ ಅಲ್ಲಿಯೇ ನಿಂತುಬಿಡುವುದೆಂದು ಕೆಲರೆಂದರು. ಅದಕ್ಕಿಂತ ಹಿಂದಿರುಗಿ ಮಾಡಿದ ಕಾರ್ಯವನ್ನು ಧಣಿಗೆ ನಿವೇದಿಸುವುದು ಒಳಿತೆಂದು ಕೆಲರೆಂದರು. ಕಡೆಗೆ, ಕೃತಕೃತ್ಯರಾಗದೆ ಹಿಂದಿರುಗುವುದಕ್ಕಿಂತ ಉಪವಾಸಮಾಡಿ ಪ್ರಾಣ ಬಿಡುವುದೇ ಲೇಸೆಂದು ಎಲ್ಲರೂ ನಿಶ್ಚಯಮಾಡಿದರು. ಅಲ್ಲಿಯೇ ಸಮುದ್ರತೀರದಲ್ಲಿಯೇ ದರ್ಭೆಯ ಹಾಸಿಗೆಯ ಮೇಲೆ ಮಲಗಿ, ಎಲ್ಲರೂ ಪ್ರಾಯೋಪವೇಶ ವ್ರತವನ್ನು ಕೈಕೊಂಡರು.

ಹೀಗೆ ಅವರು ವ್ರತ ಕೈಕೊಳ್ಳುವುದನ್ನು ಬಳಿಯ ಗುಡ್ಡದ ಮೇಲೆ ಕುಳಿತಿದ್ದ ಒಂದು ಹದ್ದು ನೋಡುತ್ತಿತ್ತು. ಅದರ ಹೆಸರು ಸಂಪಾತಿ. ಜನ ಸ್ಥಾನದಲ್ಲಿ ರಾವಣನೊಡನೆ ಹೋರಾಡಿ ಮಡಿದ ಜಟಾಯುವು ಅದರ ತಮ್ಮ. ಹಿಂದೆ ಸಂಪಾತಿಯೂ ಜಟಾಯುವೂ ಪಂಥ ಕಟ್ಟಿಕೊಂಡು ಗಗನಮಂಡಲದಲ್ಲಿ ಹಾರ ಹೋಗಿದ್ದುವು. ಒಂದನ್ನು ಒಂದು ಮೀರಿಸಬೇಕೆಂದು ಮೇಲೆ ಮೇಲಕ್ಕೆ ಹಾರಿದುವು. ಹಾರಿ ಹಾರಿ ಸೂರ್ಯ ಮಂಡಲದ ವರಿವಿಗೂ ಏರಿದುವು. ಸಂಪಾತಿಯು, ತಮ್ಮನು ಬಳಲೀತೆಂದು ಕನಿಕರಪಟ್ಟು, ಅದಕ್ಕೆ ನೆರಳಾಗ ಬೇಕೆಂದು ಇನ್ನೂ ಮೇಲೆ ಹಾರಿತು. ಹಾಗೆ ಹಾರುವಾಗ ಸೂರ್ಯನಿಗೆ ಅತಿ ಸಮೀಪ ಬಂದುದರ ಫಲವಾಗಿ ರೆಕ್ಕೆ ಸುಟ್ಟು ಭಸ್ಮವಾಗಿ ಕೆಳಗೆ ಉರುಳಿ ಬಿದ್ದಿತು. ಆಗ ತಾನು ಇದ್ದ ಸಮುದ್ರ ತೀರದಲ್ಲಿಯೇ ಅದು ಬಿದ್ದುದು. ಸುಟ್ಟ ರೆಕ್ಕೆಯು ಮತ್ತೆ ಹುಟ್ಟಲಿಲ್ಲ. ಅದರಿಂದ ಹಾರುವ ಶಕ್ತಿ ನಿಂತು ಆ ಹದ್ದು ಅಲ್ಲಿಯೇ ಇತ್ತು. ಹೀಗೆಯೇ ಇರುವಾಗ, ಆ ಮಾರ್ಗವಾಗಿ ನಿಶಾಕರನೆಂಬ ಮಹರ್ಷಿಯು ಬಂದನು. ಹದ್ದು ತನ್ನ ವೃತ್ತಾಂತವನ್ನೆಲ್ಲ ಅವನಿಗೆ ಹೇಳಿ ಕೊಂಡಿತು. ನಿಶಾಕರನು ಆ ಹದ್ದಿನ ಸ್ಥಿತಿಗೆ ಮರುಕಗೊಂಡು, ಮುಂದೆ ರಾವಣನು ಕದ್ದೊಯ್ದ ಸೀತೆಯನ್ನು ಅರಸುತ್ತ ಕೆಲವರು ವಾನರರು ಬರುವ ರೆಂದೂ, ಅವರಿಗೆ ರಾವಣನ ಲಂಕಾನಗರಿಯ ದಾರಿಯನ್ನು ತೋರಿಕೊಟ್ಟರೆ ರೆಕ್ಕೆಗಳು ಮರಳುವುವೆಂದೂ ತಿಳಿಸಿದನು. ಆ ಸುಯೋಗವನ್ನೇ ಎದುರು ನೋಡುತ್ತ ಸಂಪಾತಿಯು ಕಾಲ ಹಾಕುತ್ತಿತ್ತು.

ಸಂಪಾತಿಯು ತಾನಿದ್ದ ಸ್ಥಳ ಬಿಟ್ಟು ದೂರ ಹೋಗುತ್ತಿರಲಿಲ್ಲ. ಅದಕ್ಕೆ ಹೋಗಲಾಗುತ್ತಿರಲಿಲ್ಲ. ಅದೆ ಕಾರಣವಾಗಿ ಅದಕ್ಕೆ ಕೆಲ ದಿವಸಗಳಿಂದ ಸರಿಯಾಗಿ ಆಹಾರ ಸಿಕ್ಕಿರಲಿಲ್ಲ. ಇಂದು ಸಮುದ್ರ ತೀರದಲ್ಲಿ ಅನೇಕ ಕಪಿಗಳು ಬಲಗುಂದಿ ಬಿದ್ದಿರುವುದನ್ನು ನೋಡಿತು. ಅನಾಯಾಸವಾಗಿ ತನಗೆ ಉತ್ಕೃಷ್ಟವಾದ ಊಟ ಸಿಕ್ಕಿತೆಂದು ಉತ್ಸಾಹಗೊಂಡು, ಅವರನ್ನು ನುಂಗಲು ತವಳಿಕೊಂಡು ಮುಂದೆ ಬರುತ್ತಿತ್ತು. ಒಂದು ಮಹಾ ಪರ್ವತವೇ ಚಲಿಸಿ ಬರುವಂತೆ ಬರುತ್ತಿದ್ದ ಸಂಪಾತಿಯನ್ನು ವಾನರರು ನೋಡಿದರು. ನೋಡಿ ಹೆದರಿದರು. ತಮ್ಮ ಜೀವದ ಹಂಗು ತೊರೆದರು. ರಾಮನು ಕಾಡಿಗೆ ಬಂದುದು, ಸೀತೆಯನ್ನು ರಾವಣನು ಕದ್ದುದು, ಅವಳನ್ನು ಹುಡುಕುವುದರ ಫಲವಾಗಿ ತಮ್ಮ ಪ್ರಾಣಕ್ಕೆ ಅಪಾಯ ಬರುತಿರುವುದು ಮೊದಲಾದುವನ್ನು ಕುರಿತು ಗೋಳಾಡ ತೊಡಗಿದರು. ಆ ಗೋಳಾಟದ ನಡುವೆ ಜಟಾಯುವು ರಾವಣನೊಡನೆ ಹೋರಾಡಿ ಮಡಿದ ಸುದ್ದಿಯೂ ಬಂದಿತು. ಜಟಾಯುವಿನ ಹೆಸರು ಕೇಳಿ ಸಂಪಾತಿಯ ಕಿವಿ ನೆಟ್ಟಗಾಯಿತು. ಅದರ ಕುತೂಹಲ ಹೆಚ್ಚಿತು. ತಮ್ಮನ್ನು ನುಂಗುವುದಕ್ಕೆಂದು ಬರುತ್ತಿದ್ದ ಹದ್ದು ಜಟಾಯುವಿನ ಅಣ್ಣನೆಂದು ತಿಳಿದು ವಾನರರ ಭಯ ಕೊಂಚ ಇಳಿಯಿತು. ರಾಮವನವಾಸ, ಸೀತಾಹರಣ, ಜಟಾಯುಮರಣ ಮೊದಲಾದ ಎಲ್ಲ ವಿಷಯಗಳನ್ನು ಸಂಪಾತಿಗೆ ತಿಳಿಸಿದರು. ಸಂಪಾತಿ ಕೂಡ ತನ್ನ ರೆಕ್ಕೆ ಸುಟ್ಟುದು ಮೊದಲಾಗಿ ನಿಶಾಕರ ಮಹರ್ಷಿಯ ಅನುಗ್ರಹದ ವರೆಗೆ ಸಮಸ್ತವನ್ನೂ ಅವರಿಗೆ ತಿಳಿಸಿತು.

ಸಂಪಾತಿಗೆ ವಯಸ್ಸಾಗಿದ್ದರೂ ಅದಕ್ಕೆ ಕಣ್ಣು ಬಹಳ ಚೆನ್ನಾಗಿ ಕಾಣುತ್ತಿತ್ತು. ರಾವಣನ ಲಂಕೆಯು ನೂರು ಯೋಜನ ದೂರದಲ್ಲಿದ್ದರೂ ಹತ್ತಿರವೇ ಇದ್ದಂತಿತ್ತು. "ಇದೊ, ನಮ್ಮ ಎದುರಿಗಿರುವ ಸಮುದ್ರವನ್ನು ದಾಟಿದರೆ, ಆಚೆ ದಕ್ಷಿಣದ ದಡದಲ್ಲಿರುವುದೇ ಲಂಕಾನಗರಿ ಅಲ್ಲಿಯೇ ರಾವಣನು ಸೀತೆಯನ್ನು ಬಂಧಿಸಿರುವುದು" ಎಂದು ಹೇಳುತ್ತಿರುವಂತೆಯೇ, ನಿಶಾಕರ ಮಹರ್ಷಿಯ ಅಭಯ ವಚನದಂತೆ ಸಂಪಾತಿಯ ರೆಕ್ಕೆ ಬೆಳೆದು ಬಲಿಯಿತು. ಸೀತಾನ್ವೇಷಣ ಕಾರ್ಯವಲ್ಲಿ ವಿಜಯಿಗಳಾಗಿರೆಂದು ವಾನರರನ್ನು ಹರಸಿ, ಸಂಪಾತಿಯು ಹಾರಿಹೋಯಿತು.

ಸೀತೆಯಿರುವ ಸ್ಥಳ ತಿಳಿದು ವಾನರರ ಮುಖ ಅರಳಿತು. ಆದರೆ ತತ್ಕ್ಷಣವೇ ಅರಳಿದಂತೆ ಮುಖ ಬಾಡಿತು. ಕಪಿಗಳು ಬೀಡು ಬಿಟ್ಟಲ್ಲಿಂದ ಲಂಕೆಗೆ ನೂರು ಯೋಜನ ದೂರ. ನೂರು ಯೋಜನದ ಸಮುದ್ರವನ್ನು ಹಾರುವುದು ಸಾಮಾನ್ಯವಲ್ಲ. ಎಲ್ಲರೂ ತಮ್ಮ ತಮ್ಮ ಶಕ್ತಿ ಸಾಮರ್ಥ್ಯಗಳನ್ನು ಹೇಳಿಕೊಂಡರು. ಎಲ್ಲರೂ ನೂರು ಯೋಜನದ ಒಳಗೆ ಹಾರುವ ಪ್ರತಾಪಿಗಳಲ್ಲದೆ, ಮೀರಿ ಹಾರಬಲ್ಲವರಲ್ಲ. ಕರಡಿಗಳ ಪ್ರಮುಖನಾದ ಜಾಂಬವಂತನು ತಾನು ಯುವಕನಾಗಿದ್ದಾಗ ಮಾಡಿದ ಸಾಹಸ ಕಾರ್ಯಗಳನ್ನು ವರ್ಣಿಸಿ, ತನಗೆ ತೊಂಬತ್ತುಯೋಜನ ಮಾತ್ರ ಹಾರಲಾದೀತೆಂದನು. ಸುಗ್ರೀವನ ಮಗನಾದ ಅಂಗದನು ನೂರು ಯೋಜನ ಹಾರಿ ಲಂಕೆ ಮುಟ್ಟಬಲ್ಲನು. ಆದರೆ ಹಿಂದಿರುಗುವಾಗ ನೂರು ಯೋಜನ ಮತ್ತೆ ಹಾರಬಲ್ಲೆನೆಂಬ ಧೈರ್ಯ ಅವನಿಗಿರಲಿಲ್ಲ. ಅಂತೂ ಎಲ್ಲರೂ ಪರಾಕ್ರಮಿಗಳಾದರೂ ಪ್ರಕೃತದ ಕಾರ್ಯಕ್ಕೆ ಸಾಕಷ್ಟು ಪರಾಕ್ರಮ ಯಾರಲ್ಲೂ ಕಾಣಿಸಲಿಲ್ಲ.

ಹೀಗೆ ಸಮುದ್ರ ಹಾರಬಲ್ಲವರಾರೆಂದು ಕಪಿಗಳೆಲ್ಲರೂ ಪರಸ್ಪರ ಶಕ್ತಿಯನ್ನು ವಿಚಾರಿಸುತ್ತ, ಸ್ವಶಕ್ತಿಯನ್ನು ಪ್ರಶಂಸಿಸುತ್ತಿರಲು, ಹನುಮಂತನು ತಾನೊಬ್ಬನು ಮಾತ್ರ ದೂರವಾಗಿ ಕುಳಿತಿದ್ದನು. ಕುಳಿತವನು ಉಸಿರಾಡದೆ ಮೌನವಾಗಿ ಸಮುದ್ರವನ್ನೇ ದೃಷ್ಟಿಸುತ್ತಿದ್ದನು. ಅವನು ಮಾತನಾಡುವವನಲ್ಲ, ಕೆಲಸ ಮಾಡಿ ತೋರಿಸತಕ್ಕವನು. ತಮ್ಮ ತಮ್ಮ ಮಾತಿನ ಸಂಭ್ರಮದಲ್ಲಿ, ಹನುಮಂತನು ಮಾತನಾಡದಿದ್ದುದು ಯಾರ ಗಮನಕ್ಕೂ ಬರಲಿಲ್ಲ. ಯಾರೂ ಹಾರಲಾರದುದನ್ನು ಕಂಡು, ಅಂಗದನು ತಾನೇ ಹಾರುವೆನೆಂದು ಸಿದ್ಧನಾದನು. ಆದರೆ ಭೃತ್ಯರಿರುವಾಗ ಸ್ವಾಮಿಯಾದವನು ತಾನೇ ಕೆಲಸಕ್ಕೆ ನಿಲ್ಲಬಾರದೆಂದು ಜಾಂಬವಂತನು ಅವನನ್ನು ತಡೆದನು. ಜಾಂಬವಂತನು ಮಹಾಜ್ಞಾನಿ. ನೂರು ಯೋಜನ ಸಮುದ್ರ ಹಾರಿ ಹಿಂದಿರುಗುವ ಸಾಮರ್ಥ್ಯವುಳ್ಳವನು ಹನುಮಂತನೊಬ್ಬನೇ ಎಂದು ಅವನಿಗೆ ತಿಳಿದಿತ್ತು. ಏಕಾಂತವಾಗಿ ಕುಳಿತಿದ್ದ ಆಂಜನೇಯನನ್ನು ಸಮೀಪಿಸಿ, ಸಮುದ್ರೋಲ್ಲಂಘನಕ್ಕಾಗಿ ಅವನನ್ನು ಪ್ರೇರಿಸಿದನು. ಹನುಮಂತನು ಹಾರಬಲ್ಲನೆಂದು ತಿಳಿಯಲು, ಕಪಿ ಕರಡಿಗಳೆಲ್ಲ ಬಂದು ಅವನನ್ನು ಪ್ರಾರ್ಥಿಸಿದರು. ಹನುಮಂತನು ತನ್ನ ಮಹಾ ಸಾಮರ್ಥ್ಯವನ್ನು ಒಪ್ಪಿಕೊಂಡನು. ಲಂಕೆಗೆ ಹೋಗಿ ಶೀಘ್ರದಲ್ಲಿಯೇ

ಅಲ್ಲಿಯ ಸಮಾಚಾರವನ್ನು ತರುವುದಾಗಿ ಧೈರ್ಯ ಹೇಳಿದನು. ಬಳಿಯ ಮಹೇಂದ್ರ ಪರ್ವತವನ್ನು ಏರಿ, ಶ್ರೀರಾಮನ ದಿವ್ಯ ನಾಮವನ್ನು ಸ್ಮರಿಸುತ್ತ, ಸಮುದ್ರವನ್ನು ದಾಟುವುದಕ್ಕಾಗಿ ಅಂತರಿಕ್ಷಕ್ಕೆ ನೆಗೆದನು. ನೆಗೆದು ಸಮುದ್ರದ ಮೇಲೆ ಹಾರುತ್ತ ಮುಂದುವರಿದನು.

---

# ಸಮುದ್ರ ಲಂಘನ

ಹನುಮಂತನು ಸಮುದ್ರ ಹಾರಿದನು. ಅವನು ಹಾರುವುದನ್ನು ಕಂಡು ಸಮುದ್ರರಾಜನಿಗೆ ಬಹಳ ಉತ್ಸಾಹ ಬಂದಿತು. ಮಹಾಕಾರ್ಯಕ್ಕಾಗಿ ಹೊರಟವನು ತನ್ನ ಮನೆಯ ಮೇಲೆ ಹೋಗುತ್ತಿರುವಾಗ ಅವನನ್ನು ಉಪಚರಿಸಬೇಕೆಂದು ಸಮುದ್ರನಿಗೆ ಮನಸಾಯಿತು. ತನ್ನಲ್ಲಿ ಮನೆಮಾಡಿಕೊಂಡಿದ್ದ ಮೈನಾಕನೆಂಬ ಪರ್ವತರಾಜನನ್ನು ಕರೆದು ಸಮುದ್ರ ಹಾರಿ ಬಳಲಿರಬಹುದಾದ ಹನುಮಂತನಿಗೆ ಅತಿಥಿಸತ್ಕಾರ ನಡೆಸಬೇಕೆಂದು ಆಜ್ಞೆಮಾಡಿದನು. ಆ ಆಜ್ಞೆಯನ್ನು ಶಿರಸಾ ವಹಿಸಲು ಮೈನಾಕನು ಸಮುದ್ರದಿಂದ ಮೇಲೆದ್ದು, ಹಾರುವ ಹನುಮಂತನ ಎದುರಾದನು.

ತನ್ನ ದಾರಿಗೆ ಅಡ್ಡಲಾಗಿ ಬಂದ ಪರ್ವತರಾಜನನ್ನು ಕಂಡು, ತನ್ನ ಗಮನಕ್ಕೆ ಎದುರಾದ ರಾಕ್ಷಸನ ಮಾಯಾರೂಪವದಿರಬಹುದೆಂದು ಹನುಮಂತನಿಗೆ ತೋರಿತು. ಯಾರಾದರೇನೆಂದು ಹನುಮಂತನು ಎದೆಯಿಂದ ಅಪ್ಪಳಿಸಿದ ಏಟಿಗೆ ಮೈನಾಕನು ತತ್ತರಿಸಿದನು. ಕೈ ಮುಗಿದುಕೊಂಡು, ಸಮುದ್ರನು ಉಪಚರಿಸಲು ಕಳುಹಿಸಿದ ಮೈನಾಕನು ತಾನೆಂದು ನಿವೇದಿಸಿದನು. ಸಮುದ್ರನು ತಾನೇ ಪ್ರತ್ಯಕ್ಷನಾಗಿ ತನ್ನ ಆತಿಥ್ಯವನ್ನು ಸ್ವೀಕರಿಸಬೇಕೆಂದು ಮಾರುತಿಯನ್ನು ಬೇಡಿದನು. ಆದರೆ ಅವನು ಹೊರಟಿರುವುದು ಅವಸರದ ಕೆಲಸಕ್ಕೆ. ಕರೆದ ಕಡೆಯೆಲ್ಲ ನಿಂತು ಹೋಗಲು ಕಾಲವಿಲ್ಲ. ಅದರಿಂದ ಆಡಿದ ಮಾತಿನಲ್ಲಿಯೇ ಸಕಲೋಪಚಾರವೂ ತನಗೆ ಸಂದಿತೆಂದು ತೃಪ್ತನಾಗಿ, ಸಮುದ್ರ ಮೈನಾಕರನ್ನು ಮನ್ನಿಸಿ ಬೀಳ್ಕೊಂಡನು.

ಹನುಮಂತನು ಸಮುದ್ರ ಹಾರುವುದನ್ನು ದೇವತೆಗಳೆಲ್ಲರೂ ಆಶ್ಚರ್ಯಚಕಿತರಾಗಿ ನೋಡುತ್ತಿದ್ದರು. ನೋಡುತ್ತಿದ್ದಂತೆಯೆ ಅವನ ಧೈರ್ಯವನ್ನು ಇನ್ನೂ ಪರೀಕ್ಷಿಸಿ ನೋಡಬೇಕೆಂದು ಅವರಿಗೆ ಮನಸಾಯಿತು. ನಾಗಮಾತೆಯಾದ ಸುರಸೆಯೆಂಬವಳನ್ನು ಕರೆದು ಹನುಮಂತನನ್ನು ಹೆದರಿಸುವ ಕೆಲಸಕ್ಕೆ ನಿಯೋಗಿಸಿದರು. ಸುರಸೆಯು ಒಂದು ಭಯಂಕರಾಕಾರವನ್ನು ತಾಳಿ ಹನುಮಂತನನ್ನು ನುಂಗುವೆನೆಂದು ಮಧ್ಯೆ ಬಂದಳು. ಅವನೇನೂ ಅಂತಹ ಘೋರ ರೂಪಗಳಿಗೆ ಹೆದರುವವನಲ್ಲ. ಆದರೆ, ಉದ್ದಕ್ಕೂ ಹೀಗೆ ಎದುರಿಸಿ

ದವರನ್ನು ಧ್ವಂಸಮಾಡುತ್ತ ನಡೆದರೆ ವೇಳೆ ಹೋದೀತೆಂಬುದೊಂದೇ ಅವನಿಗೆ ಯೋಚನೆ. ರಾಮದೂತನಾದ ತಾನು ತನ್ನ ಕಾರ್ಯವನ್ನು ಕಡೆಮುಟ್ಟ ಮುಗಿಸಿ, ಅನಂತರ ತಾನಾಗಿಯೇ ಬಂದು ಅವಳ ಆಹಾರವಾಗುವೆನೆಂದು ಹನುಮಂತನು ಪ್ರಮಾಣಮಾಡಿದನು. ಸುರಸೆಯು ಆ ಮಾತು ಕೇಳಲಿಲ್ಲ. ತನ್ನ ದಾರಿಯಲ್ಲಿ ಬಂದವರು ತನ್ನ ಬಾಯನ್ನು ಹೊಗದೆ ಮುಂದೆ ಹೋಗ ಬಾರದಾಗಿ ಬ್ರಹ್ಮನಿಂದ ತನಗೆ ವರವುಂಟೆಂದಳು. ಮಾತನಾಡಿ ಪ್ರಯೋಜನ ವಿಲ್ಲವೆಂದು ಮಾರುತಿಗೆ ತೋರಿತು. ನುಂಗು ನೋಡೋಣ ಎನ್ನುತ್ತ ತನ್ನ ಮೈಯನ್ನು ಸುರಸೆಯ ಮೈಗಿಂತ ದೊಡ್ಡದಾಗಿ ಬೆಳೆಸಿದನು. ಸುರಸೆಯು ಬೇಕಾದ ರೂಪನ್ನು ಬೇಕಾದಾಗ ತಾಳಬಲ್ಲವಳು. ಅವಳು ಕಾಮರೂಪಿಣಿ. ತನ್ನ ಬಾಯನ್ನು ಅವನ ಮೈಗಿಂತ ಹಿರಿದಾಗಿ ತೆಗೆದಳು. ಹನುಮನ ಮೈ ಇನ್ನೂ ಬೆಳೆಯಿತು. ಸುರಸೆಯ ಬಾಯಿ ಅದಕ್ಕಿಂತ ಹಿರಿದಾಯಿತು. ಹನುಮಂತನ ಮೈ ಬೆಳೆದುದಕ್ಕಿಂತ ಹೆಚ್ಚಾಗಿ ಸುರಸೆಯ ಬಾಯಿ ಬೆಳೆಯಿತು. ಹೀಗೆ ಸ್ಪರ್ಧೆ ನಡೆಯುತ್ತಿರಲು, ಹನುಮಂತನು ತಟಕ್ಕನೆ ಅತಿಸೂಕ್ಷ್ಮನಾಗಿ, ಸುರಸೆಯ ದೊಡ್ಡ ಬಾಯನ್ನು ಪ್ರವೇಶಿಸಿದನು. ಅವಳ ಬಾಯಿ ಕಿರಿದಾಗುವ ಮುಂಚೆಯೆ ಹೊರಕ್ಕೆ ಹಾರಿ ತನ್ನ ಮೊದಲಿನ ರೂಪವನ್ನು ತಾಳಿದನು. ಸುರಸೆಯ ನಿಯಮವನ್ನು ನಡೆಸಿ ಗೆದ್ದೆನೆಂದು ಅವಳನ್ನು ದಾಟಿ ಮುಂದೆ ಹೋದನು. ಅವನ ಧೈರ್ಯವನ್ನೂ ಚಮತ್ಕಾರವನ್ನೂ ಕಂಡು ದೇವತೆಗಳೆಲ್ಲ ಹಿಗ್ಗಿದರು. ಸುರಸೆಯು ತನ್ನ ನಿಜರೂಪವನ್ನು ತೋರಿ, ತನ್ನದು ಪರೀಕ್ಷೆ ಮಾತ್ರವೆಂದುಸುರಿ, ಆಂಜನೇಯನನ್ನು ಹರಸಿ ಕಳುಹಿಸಿದಳು.

ಆಂಜನೇಯನ ಮಾರ್ಗವಿನ್ನೂ ಸುಗಮವಾಗಿರಲಿಲ್ಲ. ಲಂಕೆಯನ್ನು ಸೇರುವ ಮುನ್ನ ಇನ್ನೊಂದು ಅಡ್ಡಿ ಕಾದಿತ್ತು. ಗಗನಮಾರ್ಗದಲ್ಲಿ ಬರುತ್ತಿದ್ದ ಮಾರುತಿಯನ್ನು ಸಿಂಹಿಕೆಯೆಂಬ ರಾಕ್ಷಸಿಯು ನೋಡಿದಳು. ಅವಳು ಇದ್ದುದು ಅದೇ ಸಮುದ್ರಲ್ಲಿ. ಮೇಲೆ ಬಂದ ಪ್ರಾಣಿಗಳ ನೆರಳನ್ನು ಅವಳು ಹಿಡಿದರೆ ಸಾಕು, ಆ ಪ್ರಾಣಿಗಳೇ ಅವಳ ವಶವಾಗುತ್ತಿದ್ದುವು. ಎಂದಿನಂತೆ ಅವಳು ಹನುಮಂತನ ನೆರಳನ್ನೂ ಹಿಡಿದಳು. ಹನುಮಂತನ ನಡೆ ನಿಂತಿತು. ಅವನು ತನ್ನ ಗತಿಭಂಗಕ್ಕೆ ಕಾರಣವೇನೆಂದು ನೋಡುತ್ತ, ಸಿಂಹಿಕೆಯನ್ನೂ ಅವಳ ತೆರೆದ ಬಾಯನ್ನೂ ಕಂಡನು. ಸುಮ್ಮನೇ ಹೊತ್ತು ಕಳೆಯುವುದು

ಬೇಡವೆಂದು, ಅವಳ ಬಾಯಿ ಹಿಡಿಸಲಾರದಷ್ಟು ದೊಡ್ಡದಾಗಿ ಮೈ ಬೆಳೆಸಿದನು. ಆದರೆ ಸಿಂಹಿಕೆಯ ಬಾಯಿ ಬೆಳೆಯುವುದಕ್ಕೆ ಮಿತಿ ಇದ್ದಂತಿರಲಿಲ್ಲ. ಹನುಮಂತನು ಅದಕ್ಕೆ ತಕ್ಕ ಉಪಾಯವೇನೆಂದು ಯೋಚಿಸಿದನು. ಕಣ್ಣಿನ ಎವೆ ಹೊಯ್ಯುವಷ್ಟರಲ್ಲಿ ಅತಿ ಸೂಕ್ಷ್ಮನಾಗಿ, ಅವಳ ಬಾಯನ್ನು ಹೊಕ್ಕು, ಅವಳ ಎದೆಯನ್ನು ಸೀಳಿ, ಪುನಃ ಹೊರಕ್ಕೆ ಹಾರಿ, ಎಂದಿನಂತೆ ಹಿರಿಯ ಮೈ ಹೊಂದಿದನು. ಸಿಂಹಿಕೆಯು ಮಡಿದಳು. ಅದು ಕಂಡು ದೇವತೆಗಳೆಲ್ಲರೂ ಸಂತುಷ್ಟರಾದರು.

ಹೀಗೆ ಸಂತುಷ್ಟರಾದ ದೇವತೆಗಳ ಕೋಲಾಹಲವಿನ್ನೂ ಕಿವಿಯಲ್ಲಿರುವಂತೆಯೇ ಹನುಮಂತನು ಹಾರಿ ಲಂಕೆಯ ಸಮೀಪಕ್ಕೆ ಬಂದನು. ತ್ರಿಕೂಟ ಪರ್ವತದ ತುದಿಯಲ್ಲಿದ್ದ ಲಂಕಾನಗರಿಯನ್ನು ನೋಡುತ್ತ, ಬಳಿಯಲಂಬವೆಂಬ ಬೆಟ್ಟದ ಮೇಲೆ ಇಳಿದನು. ಹನುಮಂತನು ಸಮುದ್ರ ಹಾರುವಾಗ ಆ ಕಾರ್ಯಕ್ಕೆ ತಕ್ಕಂತೆ ಮೈಯನ್ನು ದೊಡ್ಡದಾಗಿ ಮಾಡಿದ್ದನು. ಕಾರ್ಯ ಮುಗಿದುದಾಗಿ, ರಾಕ್ಷಸರು ತನ್ನ ಮಹಾರೂಪವನ್ನು ಕಂಡು ಜಾಗ್ರತರಾಗಬಹುದಾಗಿ, ತನ್ನ ಮಹಾರೂಪವನ್ನು ಮುನ್ನಿನ ಸಾಧಾರಣ ರೂಪಕ್ಕೆ ಇಳಿಸಿದನು. ಇಳಿಸಿ, ಮುಂದಿರುವ ಲಂಕೆಯ ಸುತ್ತಿನ ಕೋಟೆಕಂದಕಗಳನ್ನೂ, ಅದನ್ನು ಸಂರಕ್ಷಿಸುತ್ತಿದ್ದ ಸೇನಾನಿಕರವನ್ನೂ ಕಂಡು, ಲಂಕಾಪ್ರವೇಶದ ವಿಚಾರವು ಮಾರುತಿಯ ಮನದಲ್ಲಿ ಮೂಡಿತು. ಆ ವೇಳೆಗೆ ಚಂದ್ರೋದಯವಾಯಿತು. ಆ ರಾತ್ರಿಯೇ ಲಂಕೆಯನ್ನು ಪ್ರವೇಶಿಸುವುದಾಗಿ ಅವನು ಮನಸ್ಸು ಮಾಡಿದನು.

ಆದರೆ ಕೆಲಸ ಕೈಗೂಡುವುದು ಮನಸ್ಸು ಮಾಡಿದಷ್ಟು ಸುಲಭವಾಗಲಿಲ್ಲ ಲಂಕಿಣಿಯೆಂಬವಳು ಲಂಕೆಯ ಬಾಗಿಲು ಕಾಯುತ್ತಿದ್ದಳು. ಅವಳು ಲಂಕಾಭಿಮಾನಿ ದೇವತೆಯು. ಅವಳನ್ನು ಸೋಲಿಸದೆ ಯಾರೂ ಲಂಕೆಯ ಒಳಗೆ ಹೋಗಲಾಗದೆಂದು ಬ್ರಹ್ಮನ ವರವಿತ್ತು. ಯಾರಿಗೂ ಅಂಜದ ಆಂಜನೇಯನು ಅವಳನ್ನೂ ಲಕ್ಷಿಸದೆ ಒಳಗೆ ನುಗ್ಗಲು ನಡೆದನು. ಲಂಕಿಣಿಯು ಅವನನ್ನು ತಡೆದಳು, ಒಳಗೆ ಬಿಡೆನೆಂದಳು. ಹನುಮಂತನು ಒಳಗೆ ಹೋಗಲೇಬೇಕೆಂದು ಹಠಹಿಡಿದುದು ಕಂಡು ಅವಳಿಗೆ ಕೋಪ ಬಂತು. ಮಾರುತಿಯ ಕೆನ್ನೆಗೆ ಅಪ್ಪಳಿಸಿದಳು. ಅವನಿಗೂ ರೇಗಿ, ಮುಷ್ಟಿಯಿಂದ ಪ್ರತಿಯಾಗಿ

ಒಂದು ಬಿಗಿದನು. ಲಂಕಿಣಿಯು ಆ ಏಟಿಗೆ ಜರ್ಝರಿತಳಾಗಿ ಉರುಳಿದಳು. ಅವಳ ಧೈರ್ಯ, ಗರ್ವ, ಎಲ್ಲ ಅಡಗಿತು. ಒಂದು ಸಾಮಾನ್ಯ ಕಪಿಯಿಂದ ತನಗೆ ಸೋಲಾದಾಗ ಲಂಕೆಯ ವಿನಾಶವು ಸಿದ್ಧವೆಂದು ಹಿಂದೆ ಬ್ರಹ್ಮನು ಹೇಳಿದ್ದುದು ಲಂಕಿಣಿಗೆ ನೆನಪಾಯಿತು. ತನ್ನ ಉನ್ನತಿಯ ಕಾಲವು ಮುಗಿಯಿತೆಂದು ತಿಳಿದು, ಹನುಮಂತನಿಗೆ ದಾರಿ ಬಿಟ್ಟು ವಿನೀತಳಾಗಿ ಪಕ್ಕಕ್ಕೆ ನಿಂತಳು.

ಆದರೆ ಹನುಮಂತನು ಹೆಬ್ಬಾಗಿಲಿನಿಂದ ಪ್ರವೇಶಿಸಲಿಲ್ಲ. ಶತ್ರುಜಯವನ್ನು ಅಪೇಕ್ಷಿಸುವವನು ದ್ವಾರಪ್ರವೇಶವನ್ನು ಮಾಡದೆ ಪ್ರಾಕಾರದ ಗೋಡೆಯನ್ನು ಹಾರಬೇಕೆಂದು ಅವನಿಗೆ ತಿಳಿದಿತ್ತು. ಅದರಂತೆ ಹಾರಿ, ರಾವಣನ ತಲೆ ಮೆಟ್ಟುವ ರೀತಿಯಲ್ಲಿ ಎಡದ ಕಾಲಿನಿಂದ ಲಂಕೆಯನ್ನು ಮೆಟ್ಟಿ, ಒಳಗಿಳಿದನು. ಆ ಮೆಟ್ಟಿದ ರಭಸಕ್ಕೆ ಲಂಕೆ ನಡುಗಿತು.

---

# ಸೀತಾ ದರ್ಶನ

ಆಂಜನೇಯನು ಲಂಕೆಯನ್ನು ಪ್ರವೇಶಿಸಿದನು. ಪ್ರವೇಶಿಸಿ ದಾರಿಯ ರಾಕ್ಷಸರ ಮನೆಗಳನ್ನೂ, ರಾವಣನ ಸೇನಾಸಮೂಹವನ್ನೂ ನೋಡುತ್ತ ನಡೆದನು. ಸಾಮಾನ್ಯ ಕಪಿಯ ಆಕಾರದಲ್ಲಿ ಅವನು ಹೋಗುತ್ತಿದ್ದುದರಿಂದ, ಅವನನ್ನು ಯಾರೂ ದೃಷ್ಟಿಸಲಿಲ್ಲ. ಹಾಗೆಯೇ ಸೀತೆಯನ್ನು ಹುಡುಕುತ್ತ, ಅರ್ಧ ರಾತ್ರಿಯ ವೇಳೆಗೆ ರಾವಣನ ಅಂತಃಪುರಕ್ಕೆ ಬಂದನು. ಅಲ್ಲಿ ಮಲಗಿದ್ದ ಸ್ತ್ರೀಯರಲ್ಲಿ ಸೀತೆ ಯಾರೆಂದು ಹುಡುಕಿ ನೋಡಿದನು. ಅವರಲ್ಲಿ ಅತಿ ಲಕ್ಷಣವತಿಯಾದ ಮಂಡೋದರಿಯನ್ನು ಕಂಡಾಗ, ಅವಳೇ ಸೀತೆಯಿರಬಹುದೆಂದು ಒಂದು ಕ್ಷಣ ಮಾತ್ರ ಭ್ರಮೆ ಬಂತು. ಆದರೆ ಅವಳ ಸುಂದರವಾದ ವೇಷಭೂಷಣಗಳನ್ನೂ, ಅವಳಿಗೆ ಮುಸುಕಿದ್ದ ಸುಖನಿದ್ರೆಯನ್ನೂ ಕಂಡು ಆ ಭ್ರಮೆ ಹೋಯಿತು. ಸೀತೆಯನ್ನು ಹುಡುಕುವುದು ಹನುಮಂತನಿಗೆ ಸುಲಭವಾದ ಕಾರ್ಯವಾಗಿರಲಿಲ್ಲ. ಸೀತೆಯನ್ನು ಅವನು ಎಂದೂ ನೋಡಿದವನಲ್ಲ. ಆದರೆ ಸೀತೆಯ ಮೈಮೇಲಿನ ಕೆಲವು ಆಭರಣಗಳನ್ನು ರಾಮನು ಗುರುತು ಹೇಳಿದ್ದನು. ಆ ಗುರುತುಗಳು ಅಲ್ಲಿಯ ಯಾವ ಸ್ತ್ರೀಯ ಬಳಿಯೂ ಇರಲಿಲ್ಲ. ಅಲ್ಲದೆ ಸೀತೆಯ ಪರಿಸ್ಥಿತಿಯಲ್ಲಿ ನಿರೀಕ್ಷಿಸಬಹುದಾದ ವಿರಹದ ಸೂಚನೆಗಳು ಯಾರಲ್ಲಿಯೂ ಗೋಚರವಾಗಲಿಲ್ಲ. ಹನುಮಂತನು ರಾವಣನ ಅಂತಃಪುರದ ಮೂಲೆಮೂಲೆಗಳನ್ನೂ ಹುಡುಕಿದನು. ಯಕ್ಷ ರಾಕ್ಷಸ ಗಂಧರ್ವ ಸ್ತ್ರೀಯರು ಅನೇಕ ಮಂದಿ ಅಲ್ಲಿದ್ದರು. ಸೀತೆ ಮಾತ್ರ ಸಿಗಲಿಲ್ಲ.

ಸೀತೆ ಸಿಗದಿರಲು ಹನುಮಂತನಿಗೆ ಬಹು ಕಳವಳವಾಯಿತು. ರಾವಣನು ಹೊತ್ತುಕೊಂಡು ಬರುವಾಗ, ಸೀತೆಯೇನಾದರೂ ಹೆದರಿ, ಮೃತಳಾದಳೋ? ಇಲ್ಲ, ತಾನೇ ಆತ್ಮಹತ್ಯ ಮಾಡಿಕೊಂಡಳೋ? ಸೀತೆಯು ರಾವಣನ ಮಾತಿಗೆ ಒಪ್ಪದೆ, ರಾವಣನೇನಾದರೂ ಅವಳನ್ನು ಕೊಂದನೊ? ಸೀತೆಯು ಬದುಕಿದ್ದುದಾದರೆ, ತಾನು ಇಷ್ಟು ಅರಸಿದರೂ ತನಗೇಕೆ ಸಿಗಲಿಲ್ಲ? ಆದರೂ ಸೀತೆಯು ಮೃತಿ ಹೊಂದಿರಲಾರಳು. ಲಂಕಾನಗರಿಯಲ್ಲಿ ಸೀತೆ ಸಿಕ್ಕುವಳೆಂದು ಸಂಪಾತಿ ಹೇಳಿತ್ತು. ಹನುಮಂತನು ಪುನಃ ಅಂತಃಪುರದಲ್ಲಿ ಒಂದು ಕಡೆ ಬಿಡದೆ ಹುಡುಕಿದನು. ಸೀತೆ ಸಿಕ್ಕಲಿಲ್ಲ. ಸೀತೆಯ ಸುದ್ದಿಯಿಲ್ಲದೆ ಹೋದಂತೆ

ಹಿಂದಿರುಗುವುದು ಹನುಮಂತನ ಮನಸ್ಸಿಗೆ ಒಪ್ಪಲಿಲ್ಲ. ಹೋಗಿ ಏನೆಂದು ಹೇಳುವುದು? ಏನೆಂದು ಕೇಳಿದವರಿಗೆ ಉತ್ತರ ಕೊಡುವುದು? ಅದಕ್ಕಿಂತ, ಹಿಂದಿರುಗದೆ ಲಂಕೆಯಲ್ಲಿಯೇ ಉಪವಾಸ ಮಾಡಿಯೊ ಅಗ್ನಿಪ್ರವೇಶದಿಂದಲೊ ಪ್ರಾಣತ್ಯಾಗ ಮಾಡುವುದೇ ಮೇಲು. ಹನುಮಂತನು ಹೀಗೆ ನಿರ್ಧರಿಸಿ, ಹತ್ತಿರದಲ್ಲಿದ್ದ ಅಶೋಕವನವನ್ನು ಕುರಿತು ನಡೆದನು. ಆದರೆ ಪ್ರಾಣತ್ಯಾಗ ಮಾಡುವುದು ವ್ಯರ್ಥವಾಗಿ ಕಂಡಿತು. ಲಂಕೆಯಲ್ಲಿ ಬಂದು ಇಳಿದ ವೇಳೆಯಿಂದ ತಾನು ಕಂಡ ಶುಭ ಶಕುನಗಳನ್ನೆಲ್ಲ ನೆನೆದನು. ಸೀತೆಯು ಸಿಕ್ಕುವ ಸಂಭವವಿನ್ನೂ ಉಂಟೆಂದು ಅವನಿಗೆನಿಸಿತು. ಆತ್ಮಹತ್ಯೆಯ ಯೋಚನೆ ಬಿಟ್ಟು, ಅಶೋಕವನದಲ್ಲಿಯೂ ಹುಡುಕಿ ನೋಡುವುದೆಂದು ಒಳಕ್ಕೆ ಹೋಗಿ, ಒಂದು ಶಿಂಶುಪಾವೃಕ್ಷವನ್ನು ಹತ್ತಿದನು. ಹತ್ತಿ, ಸುತ್ತಲೂ ಈಕ್ಷಿಸಿದನು.

ರಾವಣನು ಸೀತೆಯನ್ನು ಕದ್ದು ತಂದಾಗ, ಅವಳನ್ನು ಮೊದಲು ತನ್ನ ಅಂತಃಪುರಕ್ಕೆ ಒಯ್ದನಷ್ಟೆ. ಅಲ್ಲಿ ತನ್ನ ಭೋಗಭಾಗ್ಯಗಳೆಲ್ಲವನ್ನೂ ತೋರಿಸಿ ಸೀತೆಯನ್ನು ಒಲಿಸಲು ಪ್ರಯತ್ನಿಸಿದನು. ಸೀತೆಗೆ ಅವನ ಮಾತು ಬೇಡವಾಗಿತ್ತು. ರಾವಣನು ಸೀತೆಯನ್ನು ಬೇಡಿದನು. ಅವಳಿಗೆ ಏನೇನೊ ಆಸೆ ತೋರಿಸಿದನು. ಕಡೆಗೆ ಅವಳನ್ನು ಕೊಲ್ಲುವೆನೆಂದು ಹೆದರಿಸಿದನು. ಅದು ಯಾವುದೂ ಸೀತೆಯ ಕಿವಿಗೆ ಬೀಳಲಿಲ್ಲ. ರಾವಣನ ಸ್ವೈರಣೆ ಹಾಳಾಯಿತು. ಸೀತೆಯನ್ನು ಅಂತಃಪುರದಿಂದ ಕಳುಹಿಸಿ, ಅಶೋಕವನದಲ್ಲಿ ಸೆರೆಯಿಟ್ಟನು. ಅವಳ ಸುತ್ತ ರಾಕ್ಷಸಸ್ತ್ರೀಯರು ಕಾವಲಿದ್ದು, ರಾವಣನನ್ನು ಮದುವೆಯಾಗೆಂದು ಮೂರು ಹೊತ್ತೂ ಅವಳನ್ನು ಕಾಡುತ್ತಿದ್ದರು. ಸೀತೆಯು ಅವರ ಮಾತನ್ನು ಕಿವಿಗೆಯೆ ಹಾಕಿಕೊಳ್ಳುತ್ತಿರಲಿಲ್ಲ. ಮೂರು ವೇಳೆಯೂ ರಾಮನ ಹೆಸರನ್ನೆ ಜಪಿಸುತ್ತ, ಕೊಳೆ ಮುಚ್ಚಿದ ತನ್ನ ನಾರುಮಡಿಯಲ್ಲಿ ತಪಸ್ವಿನಿಯಂತೆ ಕಾಣುತ್ತಿದ್ದಳು. ತನ್ನ ಉಳಿದ ಆಭರಣಗಳನ್ನೆಲ್ಲ ತೆಗೆದು, ಹಿಂದೆ ಇದ್ದ ಮರಕ್ಕೆ ನೇತುಹಾಕಿದ್ದಳು. ಆ ಸ್ಥಿತಿಯಲ್ಲಿದ್ದ ಸೀತೆಯನ್ನೂ ಅವಳ ಆಭರಣಗಳನ್ನೂ ಶಿಂಶುಪಾವೃಕ್ಷದ ಮೇಲಿನ ಹನುಮಂತನು ಕಂಡನು.

ಆ ಹೊತ್ತಿಗೆ ಬೆಳಗಿನ ಜಾವವಾಗಿತ್ತು. ಸೀತೆಯನ್ನು ಕಾಣುವುದಕ್ಕಾಗಿ ರಾವಣನೂ ಅವನ ರಾಕ್ಷಸ ಪರಿವಾರವೂ ಮಹಾವೈಭವದೊಡನೆ ಅಶೋಕವನಕ್ಕೆ ಬಂತು. ರಾವಣನು ಎಂದಿನಂತೆ ತನ್ನ ಪರಾಕ್ರಮವನ್ನೂ ಸಂಪತ್ತನ್ನೂ

ಹೊಗಳಿಕೊಂಡು, ರಾಮನನ್ನು ಬಾಯಿಗೆ ಬಂದಂತೆ ಹೀಯಾಳಿಸಿದನು. ರಾಕ್ಷಸ ಪರಿವಾರವು ರಾವಣನನ್ನು ಬಗೆಬಗೆಯಾಗಿ ಸ್ತೋತ್ರ ಮಾಡಿ, ಅವನನ್ನು ಮದುವೆಯಾಗುವುದ ಮೇಲೆಂದು ಸೀತೆಗೆ ಬುದ್ಧಿವಾದಹೇಳಿತು. ರಾವಣನು ತನ್ನನ್ನೇ ಮದುವೆಯಾಗೆಂದು ಸೀತೆಯನ್ನು ಅನೇಕ ವಿಧಗಳಲ್ಲಿ ಕಾಡಿ ಬೇಡಿದನು. ಸೀತೆಗೆ ಅವನ ಸಂಗಡ ಮಾತನಾಡುವುದಕ್ಕೂ ಅಸಹ್ಯವಾಗುತ್ತಿತ್ತು. ಎದುರಿಗೆ ಒಂದು ಹುಲ್ಲು ಕಡ್ಡಿಯಿಟ್ಟು ಅದಕ್ಕೆ ಹೇಳುವ ನೆವದಲ್ಲಿ ರಾವಣನಿಗೆ ಉತ್ತರ ಹೇಳಿದಳು. ಪರಸ್ತ್ರೀಯನ್ನು ಪೀಡಿಸಬಾರದೆಂದು ಬುದ್ಧಿ ಹೇಳಿದಳು. ಮೂರ್ಖತನ ಮಾಡದೆ ರಾಮನೊಡನೆ ಸ್ನೇಹದಿಂದ ನಡೆದು ಬಾಳೆಂದಳು. ತಾನು ಸತ್ತರೂ ಸರಿಯೆ, ರಾಮನ ಹೊರತು ಬೇರೆ ಯಾರನ್ನೂ ಸ್ಮರಿಸುವುದು ಕೂಡ ಇಲ್ಲವೆಂದು ಸ್ಪಷ್ಟವಾಗಿ ಹೇಳಿದಳು. ಸೀತೆಯ ಮಾತು ಕೇಳಿ ರಾವಣನಿಗೆ ಬಹು ರೋಷ ಬಂತು. ಎರಡು ತಿಂಗಳ ಅವಧಿ ಕೊಟ್ಟು, ಅಷ್ಟರಲ್ಲಿ ತಾನೆಂದಂತೆ ನಡೆಯದಿದ್ದರೆ ಅವಳನ್ನು ಸಂಹರಿಸುವೆನೆಂದು ಹೆದರಿಸಿದನು. ಸೀತೆಯನ್ನು ತನ್ನ ಇಷ್ಟಾನುಸಾರ ನಡೆಯಲು ಮಾಡುವಂತೆ ರಾಕ್ಷಸ ಸ್ತ್ರೀಯರನ್ನು ನಿಯಮಿಸಿ, ಅಂತಃಪುರಕ್ಕೆ ಹೋದನು.

ಇತ್ತ ರಾಕ್ಷಸ ಸ್ತ್ರೀಯರು ಸೀತೆಯನ್ನು ಗೋಳುಗುಟ್ಟಿಸಲು ಮೊದಲು ಮಾಡಿದರು. ರಾವಣನನ್ನು ಮದುವೆಯಾಗುವುದು ಒಂದಲ್ಲದೆ ಬೇರೆ ಮಾತೇ ಇಲ್ಲ. ಆ ರಾಕ್ಷಸಿಯರ ಹಿಂಸೆ ನಿರ್ಬಂಧಗಳನ್ನು ತಡೆಯಲಾರದೆ ಸೀತೆಗೆ ಅಳು ಉಕ್ಕಿ ಬಂತು. ಅವರ ಹಿಂಸೆಯನ್ನು ಹೀಗೆ ಸೈರಿಸುವುದಕ್ಕಿಂತ, ತಾನು ಪ್ರಾಣ ಬಿಡುವೆನೆಂದಳು. ಆ ಮಾತು ಕೇಳಿ ರಾಕ್ಷಸಸ್ತ್ರೀಯರ ನಿರ್ಬಂಧ ಕೊಂಚ ಕಡಿಮೆಯಾಯಿತು. ಸೀತೆಯು ನಿಜವಾಗಿಯೂ ಪ್ರಾಣ ಬಿಟ್ಟರೆ, ರಾವಣನು ಅವರನ್ನು ಸುಮ್ಮನೆ ಬಿಡುವಂತಿರಲಿಲ್ಲ. ಅಲ್ಲದೆ, ಅವರು ಸುಮ್ಮನಾಗಲು ಬೇರೊಂದು ಕಾರಣವೂ ಸೇರಿತು. ಕಾವಲಿದ್ದ ಆ ರಾಕ್ಷಸಿಯರಲ್ಲಿ ತ್ರಿಜಟೆಯೆಂಬವಳು ಒಬ್ಬಳು. ಅವಳು ರಾವಣನ ತಮ್ಮನಾದ ವಿಭೀಷಣನ ಮಗಳು. ತ್ರಿಜಟೆಯು ರಾಕ್ಷಸಿಯಾದರೂ ಮಿಕ್ಕವರಂತೆ ಕ್ರೂರಿಯಾಗಿರಲಿಲ್ಲ. ಅವಳಿಗೆ ಹಿಂದಿನ ರಾತ್ರಿ ಕೆಲವು ದುಃಸ್ವಪ್ನಗಳಾದುವು. ಆಗ ರಾವಣನು ಮೊದಲಾಗಿ ಲಂಕೆಗೆ ಲಂಕೆಯೇ ನಾಶವಾದಂತೆ ಸ್ವಪ್ನ ಕಂಡಳು. ಆ ಸ್ವಪ್ನವನ್ನು ರಾಕ್ಷಸಿಯರಿಗೆ ತಿಳಿಸಿ, ಸೀತೆಯನ್ನು ಕಾಡಬೇಡಿರೆಂದು ನುಡಿದಳು.

ರಾಕ್ಷಸಸ್ತ್ರೀಯರು ಹೆದರಿ, ತಮ್ಮ ಮಾತು ನಿಲ್ಲಿಸಿ, ಹಾಗೆಯೇ ಮಲಗಿ ನಿದ್ದೆ ಹೋದರು.

ಸೀತೆಯು ತಾನು ಪ್ರಾಣ ಬಿಡುವೆನೆಂದು ಹೇಳಿದುದು ಬರಿಯ ಬಾಯಿ ಮಾತಾಗಿರಲಿಲ್ಲ, ಹೃದಯಪೂರ್ವಕವಾಗಿ ಹೇಳಿದುದಾಗಿತ್ತು. ಅವಳಿಗೆ ರಾಕ್ಷಸಿಯರ ಹಾವಳಿ ತಡೆದು ತಡೆದು ಸಾಕಾಗಿತ್ತು. ಪತಿಯನ್ನು ಅಗಲಿ, ವಿರಹದ ದುಃಖವೂ ಸಹಿಸಲಸಾಧ್ಯವಾಗಿತ್ತು. ಪ್ರತಿದಿನವೂ ರಾವಣನ ಮಾತು ಕೇಳಿ ಕೇಳಿ, ಸೀತೆ ಬಹು ನೊಂದಿದ್ದಳು. ಆ ಬಾಳಿಗಿಂತ ಸಾವೇ ಉತ್ತಮವೆನಿಸಿತ್ತು. ಪ್ರಾಣ ಬಿಡಲು ಮನಸ್ಸು ಮಾಡಿದ ಸೀತೆಯು ತನ್ನ ಜಡೆಯನ್ನೇ ಕೊರಲಿಗೆ ಸುತ್ತಿಕೊಂಡು ನೇಣು ಹಾಕಿಕೊಳ್ಳಲು ಯತ್ನಿಸಿದಳು. ಅದೇ ಸಮಯದಲ್ಲಿ ಅವಳಿಗೆ ಕೆಲವು ಶುಭ ಶಕುನಗಳಾದುವು. ಆ ಶಕುನ ಕಂಡು ಸೀತೆಯ ಕೈ ತಡೆಯಿತು.

ಅಷ್ಟರಲ್ಲಿ ತಾನೇ ಇಳಿದು ಸೀತೆಯನ್ನು ಸಮಾಧಾನಗೊಳಿಸಬೇಕೆಂದು ಹನುಮಂತನ ಮನಸ್ಸು ತುಡಿಯಿತು. ಆದರೆ ಒಮ್ಮೆಗೇ ತಾನು ಹೋದರೆ, ಸೀತೆಯು ತನ್ನನ್ನು ನಂಬದೆ ಹೆದರಬಹುದೆಂದು ಶಂಕಿಸಿದನು. ಆದರೂ ಸೀತೆಯನ್ನು ಧೈರ್ಯಗೊಳಿಸಲೋಸುಗ, ತಾನಿದ್ದ ಮರದಲ್ಲಿಯೇ ಕುಳಿತು, ರಾಮನ ವೃತ್ತಾಂತವನ್ನು ಹಾಡತೊಡಗಿದನು. ಆ ದನಿ ಕೇಳಿ ಸೀತೆಯು ಕತ್ತೆತ್ತಿ ನೋಡಿದಳು. ಕಣ್ಣಿಗೆ ಬಿದ್ದ ಕಪಿಯನ್ನು ನೋಡಿ, ದುಃಸ್ವಪ್ನವೆಂದು ಅಂಜಿದಳು. ಆಂಜನೇಯನು ಅವಳನ್ನು ಗೌರವ ಭಕ್ತಿಗಳಿಂದ ಮಾತನಾಡಿಸಿ ತಾನು ರಾಮನ ದಾಸನೆಂದು ತಿಳಿಸಿದನು. ರಾಮ ಲಕ್ಷ್ಮಣರ ಸಮಾಚಾರ ವನ್ನೆಲ್ಲ ಹನುಮಂತನ ಮುಖದಿಂದ ಕೇಳಿ ಸೀತೆಗೆ ಬಹು ಆನಂದವಾಯಿತು. ವಾತ್ಸಲ್ಯದಿಂದ ಅವನನ್ನು ಹತ್ತಿರ ಕರೆದಳು. ತತ್‌ಕ್ಷಣವೇ ಕಪಿಯ ವೇಷ ದಲ್ಲಿ ರಾವಣನೇ ಬಂದಿರಬಹುದೆಂದು ಅವಳಿಗೆ ಶಂಕೆಯಾಯಿತು. ಹನು ಮಂತನು ತಾನು ರಾಮನ ದೂತನೆಂದು ಸಕಾರಣವಾಗಿ ಸ್ಥಾಪಿಸಬೇಕಾಯಿತು. ಹಿಂದೆ ತಾನು ಸೀತೆಯೊಡನೆ ವಿಹರಿಸಿದುದು, ಅವಳೊಡನೆ ಆಡಿದ ಮಾತು ಕತೆಗಳು ಮೊದಲಾಗಿ ಎಲ್ಲವನ್ನೂ ಶ್ರೀರಾಮನು ಹನುಮಂತನಿಗೆ ತಿಳಿಸಿದ್ದನು. ಹನುಮಂತನು ಅವೆಲ್ಲವನ್ನೂ ಸೀತೆಗೆ ನೆನಪು ಕೊಟ್ಟನು. ಅಲ್ಲದೆ, ಕಿಷ್ಕಿಂಧೆ ಯಿಂದ ಹೊರಡುವಾಗ ರಾಮನು ತನ್ನ ಕೈಲಿಟ್ಟ ಮುದ್ರೆಯುಂಗುರವನ್ನೂ

ಅವಳಿಗೆ ಒಪ್ಪಿಸಿದನು. ಹನುಮಂತನು ಸೀತಾ ರಾಮರ ಸಹವಾಸದ ಸೂಕ್ಷ್ಮಾಂಶಗಳನ್ನು ಹೇಳಿದುದರಿಂದ, ಸೀತೆಯ ಅಧೈರ್ಯ ಹೋಯಿತು. ಅದು ಹೋಗಿ, ಹುಟ್ಟಿದ ಹೊಸ ನಂಬಿಕೆಯು ಮುದ್ರೆಯುಂಗುರವನ್ನು ಕಂಡು ಬಲವಾಯಿತು.

ಹನುಮಂತನು ಸೀತೆಯನ್ನು ಕಂಡುದಾಯಿತು. ಇನ್ನು ರಾಮನ ಬಳಿಗೆ ಆವಳನ್ನು ಕೊಂಡು ಹೋಗುವುದೊಂದೆ ಉಳಿದುದು. ಹನುಮಂತನು ಮಹಾ ಶಕ್ತನು. ಸೀತೆಯನ್ನು ಹೆಗಲ ಮೇಲೇರಿಸಿಕೊಂಡು ಸುರಕ್ಷಿತವಾಗಿ ರಾಮನ ಬಳಿಗೆ ಕರೆದು ತರಬಲ್ಲನು. ಆದರೆ ಸೀತೆ ಅದಕ್ಕೆ ಒಪ್ಪಲಿಲ್ಲ. ಹಾಗೆ ಹೋಗುವುದಕ್ಕಿಂತ, ರಾಮನು ಬಂದು ಶತ್ರುಸಂಹಾರ ಮಾಡಿ ವೀರ್ಯದಿಂದ ತನ್ನನ್ನು ಪಡೆಯುವುದೇ ಉಚಿತವೆಂದಳು. ಅದರಂತೆ ಹನುಮಂತನು ಸಮುದ್ರವನ್ನು ದಾಟಿ ಕಿಷ್ಕಿಂಧೆಗೆ ಹೋಗಿ ರಾಮನನ್ನು ಕರೆತರಬೇಕೆಂದು ಗೊತ್ತಾಯಿತು. ಆದರೆ ರಾಮನು ಸಮುದ್ರವನ್ನು ಹೇಗೆ ದಾಟಿಯಾನೆಂದು ಸೀತೆಯು ಶಂಕಿಸಿದಳು. ಹನುಮಂತನು ಆಕೆಗೆ ತಮ್ಮ ವಾನರಸೇನೆಯ ಮಹಾಬಲವನ್ನು ತಿಳಿಸಿ, ಸಮುದ್ರ ದಾಟುವುದು ತಮಗೆ ಮಕ್ಕಳಾಟವೆಂದನು. ಕಡೆಗೆ ರಾಮ ಲಕ್ಷ್ಮಣರನ್ನು ತಾನೇ ಎತ್ತಿಕೊಂಡು ಸಮುದ್ರ ಹಾರಿ, ರಾವಣನನ್ನು ಕೊಲ್ಲಿಸಿ, ಸೀತೆಯನ್ನು ಬಿಡಿಸುವುದಾಗಿ ಸಮಾಧಾನ ಹೇಳಿದನು. ಹೇಳಿ, ಸೀತೆಯ ಅನುಮತಿ ಪಡೆದು ಹೊರಡಲು ಸಿದ್ಧನಾದನು.

ಹೊರಡುವಾಗ ಹನುಮಂತನಿಗೊಂದು ಯೋಚನೆ ಬಂತು. ಇಲ್ಲಿ ಸೀತೆಯು ರಾಮನ ಗುರುತು ಕೇಳಿದಂತೆ, ಅಲ್ಲಿ ರಾಮನು ಸೀತೆಯ ಗುರುತು ಕೇಳಿದರೆ? ಅದಕ್ಕಾಗಿ ರಾಮನ ನಂಬಿಕೆಗೆ ಒಂದು ಗುರುತಿರಲೆಂದು ಸೀತೆಯು ತನ್ನ ಚೂಡಾಮಣಿಯೆಂಬ ತಲೆಯ ಆಭರಣವನ್ನು ಮಾರುತಿಯ ಕೈಲಿಟ್ಟಳು. ಅಲ್ಲದೆ ತನಗೆ ರಾಮನಿಗೆ ಇಬ್ಬರಿಗೆ ಮಾತ್ರ ತಿಳಿದಿದ್ದ ತಮ್ಮ ಸಹವಾಸದ ಒಂದೆರಡು ಸಂಘಟನೆಗಳನ್ನೂ ಅವನಿಗೆ ತಿಳಿಸಿದಳು. ಹನುಮಂತನು ಆ ಚೂಡಾಮಣಿಯನ್ನೂ ಆಕೆಯ ಸಂದೇಶಗಳನ್ನೂ ಭಕ್ತಿಯಿಂದ ಸ್ವೀಕರಿಸಿದನು. ಪುನಃ ಅವಳ ಅನುಮತಿ ಪಡೆದು, ಅಶೋಕವನದಿಂದ ಹೊರ ಹೊರಡಲು ತಿರುಗಿದನು.

# ರಾಕ್ಷಸ ಬಲ ಪರೀಕ್ಷೆ

ಹನುಮಂತನು ಬಂದ ಕಾರ್ಯ ಮುಗಿಯಿತು. ಸೀತೆಯನ್ನು ಕಂಡುದಾಯಿತು. ಅಲ್ಲಿನ ವಿದ್ಯಮಾನಗಳನ್ನು ನೋಡಿದರೆ, ಯುದ್ಧವು ಅನಿವಾರ್ಯವಾಗಿ ತೋರಿತು. ಯುದ್ಧವಾಗಬಹುದಾದ್ದರಿಂದ, ದೂತನಾಗಿ ಬಂದ ತಾನು ಹಾಗೆಯೇ ಶತ್ರುಬಲವನ್ನೂ ತಿಳಿದು ಹೋಗುವುದು ಲೇಸು. ರಾವಣನನ್ನು ಕಂಡು ಮಾತನಾಡಿ ಅವನ ಮನಸ್ಸನ್ನು ತಿಳಿಯಬೇಕು. ಅವನ ಸೈನ್ಯದವರ ಶಕ್ತಿಯನ್ನು ಅಳೆಯಬೇಕು. ಅದಕ್ಕೆ ಉಪಾಯವೇನೆಂದು ಹನುಮಂತನು ಯೋಚಿಸಿದನು. ರಾವಣನಿಗೆ ಪ್ರಿಯವಾದ ಅಶೋಕ ವನವನ್ನು ಹಾಳುಮಾಡುವುದಕ್ಕಿಂತ ಒಳ್ಳೆಯದು ಏನೂ ತೋರಲಿಲ್ಲ. ಅಶೋಕ ವನ ಭಂಗದಿಂದ ರಾಕ್ಷಸರಿಗೆ ಕೋಪ ಬರುವುದು. ಅವರು ಬಂದು ಮೇಲೆ ಬಿದ್ದರೆ ಅವರನ್ನು ಧ್ವಂಸ ಮಾಡಬಹುದು. ಅದರಿಂದ ಕೊಂಚ ಮಟ್ಟಿಗೆ ಶತ್ರುವಧೆಯೂ ಆಗುವುದು. ಅಶೋಕವನ ಹಾಳಾಗಿ ರಾಕ್ಷಸ ಸಂಹಾರ ನಡೆದರೆ, ರಾವಣನ ದರ್ಶನವೂ ಸಿಕ್ಕಬಹುದು. ಹನುಮಂತನು ಆ ಯೋಚನೆಯನ್ನು ಸೀತೆಗೆ ತಿಳಿಸಿ ಅವಳ ಅನುಜ್ಞೆ ಪಡೆದು ಅಶೋಕವನವನ್ನು ಒಂದು ಕಡೆಯಿಂದ ನಾಶಮಾಡುತ್ತ ಬಂದನು. ಅದಕ್ಕಾಗಿ ತನ್ನ ಸಣ್ಣ ರೂಪವನ್ನು ದೊಡ್ಡದಾಗಿ ಬೆಳೆಸಿದನು.

ಹನುಮಂತನ ಹಾವಳಿ ಕಂಡು, ಅಲ್ಲಿಯ ರಾಕ್ಷಸ ಸ್ತ್ರೀಯರಿಗೆ ಭಯ ಹುಟ್ಟಿತು. ಆ ಕಪಿ ಯಾರೆಂದು ಸೀತೆಯನ್ನು ಕೇಳಿದರು. ಸೀತೆಯು ತಾನು ಏನೂ ಅರಿಯದವಳಂತೆ ನಟಿಸಿದಳು. ರಾಕ್ಷಸಿಯರು ಏನು ಮಾಡಲೂ ತೋಚದೆ ರಾವಣನ ಬಳಿಗೆ ಓಡಿ ಹೋಗಿ ಅಶೋಕವನ ಹಾಳಾಗುತ್ತಿರುವುದು ತಿಳಿಸಿದರು. ರಾವಣನಿಗೆ ತನ್ನ ಅಶೋಕವನದ ನಾಶ ಕೇಳಿ ರೇಗಿತು. ಹನುಮಂತನ ಮೇಲೆ ಒಂದು ರಾಕ್ಷಸ ಸೈನ್ಯವನ್ನು ಕಳುಹಿಸಿದನು. ಅವನು ತಿರುಗಿಸುತ್ತಿದ್ದ ವೃಕ್ಷಕ್ಕೆ ಸಿಕ್ಕಿ ಆ ಸೇನೆ ನಿರ್ನಾಮವಾಯಿತು. ಹೆಚ್ಚು ಸೇನೆ ಬಂತು. ಹನುಮಂತನ ಕೈಲಿ ಮಡಿಯಿತು. ರಾವಣನ ಮಂತ್ರಿಯಾದ ಪ್ರಹಸ್ತನ ಮಗ ಜಂಬುಮಾಲಿಯೆಂಬ ವೀರಾಗ್ರೇಸರನು ಬಂದು ಮಾರುತಿಯ ಕೈಲಿ ಹತನಾದನು. ರಾವಣನು ಸೇನೆ ಕಳುಹಿಸುವುದು, ಹನುಮಂತನು

ಅವರನ್ನು ಹತಮಾಡುವುದು—ಇದೇ ಆಯಿತು. ಏಳು ಮಂದಿ ರಾವಣನ ಮಂತ್ರಿ ಕುಮಾರರೂ ಐವರು ಸೇನಾಪತಿಗಳೂ ಲಕ್ಷಾಂತರ ಯೋಧರೂ ಅರೆ ಗಳಿಗೆಯಲ್ಲಿ ಬಲಿಯಾದರು.

ಹೋದವರೆಲ್ಲ ಹೀಗೆ ಹಾಳಾಗುವುದು ಕಂಡು, ರಾವಣನ ಮಗನಾದ ಅಕ್ಷಕುಮಾರನು ತಾನೇ ದಂಡೆತ್ತಿ ಬಂದನು. ಹಿಂದಿನವರಿಗಾದ ಗತಿಯೇ ಅವನಿಗೂ ಆಯಿತು. ವೀರರೆಲ್ಲರೂ ಈ ರೀತಿ ನಾಶವಾಗುವುದು ಕಂಡು ರಾವಣನಿಗೆ ಸಮಾಧಾನ ಹೋಗಿತ್ತು. ತನ್ನ ಇನ್ನೊಬ್ಬ ಮಗನಾದ ಇಂದ್ರ ಜಿತುವನ್ನು ಅಶೋಕ ವನಕ್ಕೆ ಕಳುಹಿಸಿದನು. ಇಂದ್ರಜಿತುವಿಗೂ ಹನು ಮಂತನಿಗೂ ಘೋರ ಸಂಗ್ರಾಮ ಜರುಗಿತು. ಹನುಮಂತನು ಯಾವ ಬಾಣಕ್ಕೂ ಜಗ್ಗದಿದ್ದುದು ಕಂಡು, ಇಂದ್ರಜಿತುವು ಅವನ ಮೇಲೆ ಬ್ರಹ್ಮಾಸ್ತ್ರ ವನ್ನು ಪ್ರಯೋಗಿಸಿದನು. ಬಂದುದು ಬ್ರಹ್ಮಾಸ್ತ್ರವಾದುದರಿಂದ ಹನು ಮಂತನು ಅದನ್ನು ತಡೆಯಲಿಲ್ಲ. ಬ್ರಹ್ಮನನ್ನು ಕಾಣುವಂತೆಯೇ ಆ ಅಮೋ ಘವಾದ ಅಸ್ತ್ರವನ್ನೂ ಗೌರವದಿಂದ ಕಂಡನು. ಬ್ರಹ್ಮಾಸ್ತ್ರವು ಅವನನ್ನು ಕಟ್ಟಿಹಾಕಿತು. ಹನುಮಂತನು ಅದನ್ನು ಬಿಡಿಸಿಕೊಳ್ಳಲು ಪ್ರಯತ್ನಿಸಲಿಲ್ಲ. ಆ ಅಸ್ತ್ರವು ತಾನೇ ಕೊಂಚ ಹೊತ್ತಿನ ಮೇಲೆ ಅವನನ್ನು ಬಿಟ್ಟುಹೋಗುವು ದೆಂದು ಹಿಂದೆ ಬ್ರಹ್ಮನು ಅವನಿಗೆ ವರ ಕೊಟ್ಟಿದ್ದನು. ಅಲ್ಲದೆ ಹಾಗೆಯೇ ಇಂದ್ರಜಿತುವು ತನ್ನನ್ನು ರಾವಣನ ಬಳಿಗೆ ಎಳೆದುಕೊಂಡು ಹೋದರೂ ನಷ್ಟ ವಿಲ್ಲವೆಂದು ಮಾರುತಿಗೆ ತೋರಿತು. ಅವನೆಣಿಸಿದಂತೆಯೇ ಇಂದ್ರಜಿತ್ತು ಅವ ನನ್ನು ರಾವಣನ ಬಳಿಗೆ ಬಂಧಿಸಿಕೊಂಡು ಹೋದನು.

ರಾವಣನಿಗೆ ಹನುಮಂತನ ಮೇಲೆ ಹುಟ್ಟಿದ್ದ ಕೋಪ ಅಷ್ಟಿಷ್ಟಲ್ಲ. ಆದರೆ ಅವನಾರೆಂಬುದನ್ನು ತಿಳಿಯುವ ಕುತೂಹಲವೂ ಹೆಚ್ಚಾಗಿತ್ತು. ಹನು ಮಂತನು ಶ್ರೀರಾಮನು ವನವಾಸಕ್ಕೆ ಹೊರಟುದು ಮೊದಲು ತಾನು ಲಂಕೆಗೆ ಬಂದು ಅಶೋಕವನವನ್ನು ಹಾಳುಮಾಡಿದ ವರೆಗೆ ಎಲ್ಲವನ್ನೂ ರಾವಣನಿಗೆ ತಿಳಿಸಿದನು. ತಾನು ರಾಮದೂತನೆಂದೂ, ಸೀತೆಯನ್ನು ಬಿಟ್ಟುಕೊಡುವುದೇ ರಾವಣನಿಗೆ ಕ್ಷೇಮವೆಂದೂ ಹೇಳಿದನು. ರಾಮ ಲಕ್ಷ್ಮಣರ ಶಕ್ತಿ ಸಾಹಸ ಗಳನ್ನೂ, ಸುಗ್ರೀವನ ವಾನರಸೈನ್ಯದ ಪೌರುಷ ಪರಾಕ್ರಮಗಳನ್ನೂ ವಿಶದ ವಾಗಿ ತಿಳಿಯಹೇಳಿದನು. ಅವನ ಮಾತು ಕೇಳುತ್ತ ಕೇಳುತ್ತ ರಾವಣನ

ಕೋಪ ಮಿತಿಮೀರಿತು. ಹನುಮಂತನನ್ನು ಕೊಲ್ಲಬೇಕೆಂದು ತನ್ನ ರಾಕ್ಷಸರಿಗೆ ಆಜ್ಞಾಪಿಸಿದನು. ಆ ಆಜ್ಞೆಯು ರಾವಣನ ತಮ್ಮನಾದ ವಿಭೀಷಣನಿಗೆ ಸರಿದೋರಲಿಲ್ಲ. ಸ್ವಾಮಿಕಾರ್ಯಕ್ಕಾಗಿ ಬಂದ ದೂತನನ್ನು ಕೊಲ್ಲುವುದು ರಾಜಧರ್ಮವಲ್ಲವೆಂದು ರಾವಣನನ್ನು ನಿವಾರಿಸಿದನು. ಸೀತೆಯನ್ನು ಈಗಲಾದರೂ ಬಿಟ್ಟು ರಾಮನೊಡನೆ ಸಂಧಿ ಮಾಡಿಕೊಳ್ಳುವುದು ಉಚಿತವೆಂದನು. ರಾವಣನಿಗೆ ಸೀತೆಯನ್ನು ಬಿಟ್ಟುಕೊಡುವುದು ಕಿವಿಗೆಯೆ ಬೀಳಲಿಲ್ಲ. ಆದರೆ ಹನುಮಂತನ ಕೊಲೆಯನ್ನು ನಿಲ್ಲಿಸಿ, ಬಾಲಕ್ಕೆ ಬೆಂಕಿ ಹಚ್ಚುವಂತೆ ಆಜ್ಞಾಪಿಸಿದನು. ಅದರಂತೆ ಅವನ ಬಾಲಕ್ಕೆ ಬಟ್ಟೆ ಸುತ್ತಿ, ಎಣ್ಣೆ ಹುಯಿದು, ಉರಿ ತಾಕಿಸಿದರು.

ಬಾಲ ಧಗಧಗನೆ ಉರಿಯಿತು. ಆದರೆ ಹನುಮಂತನಿಗೆ ಕೊಂಚವೂ ನೋವಾಗಲಿಲ್ಲ. ಹನುಮಂತನ ತಂದೆಯಾದ ವಾಯುವೂ ಅಗ್ನಿಯೂ ಮಿತ್ರರಾದುದರಿಂದ ಅಗ್ನಿಯು ವಾಯುಪುತ್ರನನ್ನು ನೋಯಿಸಲಿಲ್ಲ. ಹನುಮನು ತನ್ನ ಉರಿವ ಬಾಲವನ್ನು ನೋಡಿ, ರಾವಣನಿಗೆ ತಕ್ಕ ಪ್ರತಿಕ್ರಿಯೆ ಮಾಡುವೆನೆಂದುಕೊಂಡನು. ಎಂದುಕೊಂಡು, ತನ್ನನ್ನು ಆ ರಾಕ್ಷಸರು ಬಿಟ್ಟುದೆ ತಡ, ಛಂಗನೆ ಹಾರಿ ಒಂದು ಮನೆಗೆ ಉರಿ ತಾಕಿಸಿದನು. ಮನೆಯಿಂದ ಮನೆಗೆ ಹಾರುತ್ತ, ಪ್ರತಿಮನೆಗೂ ಬಾಲದ ಬೆಂಕಿ ಮುಟ್ಟಿಸುತ್ತ, ವಾಯುವೊಡನೆ ವಾಯುವಾಗಿ ನೆಗೆದು ಮುಂದೆ ಹೋದನು. ಬೆಂಕಿ ಮನೆಯಿಂದ ಮನೆಗೆ ಹಬ್ಬಿತು. ವಿಭೀಷಣನ ಮನೆಯೊಂದುಳಿದು ಉಳಿದ ಮನೆಗಳು ಭಸ್ಮವಾದವು. ತಪ್ಪಿಸಿಕೊಂಡ ರಾಕ್ಷಸರು ಮಾತ್ರ ಉಳಿದರು. ಹೀಗೆ, ತನ್ನನ್ನು ಕೆಣಕಬಾರದಾಗಿತ್ತೆಂದು ರಾಕ್ಷಸರು ಪಶ್ಚಾತ್ತಾಪ ಪಡುವ ಹಾಗೆ, ಲಂಕೆಯನ್ನೆಲ್ಲ ಸುಟ್ಟು ಬೂದಿಮಾಡಿ, ಹನುಮಂತನು ಸಮುದ್ರತೀರಕ್ಕೆ ಬಂದನು.

ಸಮುದ್ರದಲ್ಲಿ ತನ್ನ ಬಾಲದ ಬೆಂಕಿಯನ್ನು ಆರಿಸಿದ ಮೇಲೆ, ಹನುಮಂತನಿಗೆ ಸೀತೆಯ ಸ್ಮರಣೆಯಾಯಿತು. ಲಂಕೆಯನ್ನು ನಾಶಗೊಳಿಸುವ ಉತ್ಸಾಹದಲ್ಲಿ ಸೀತೆಯ ನೆನಪೇ ಅವನಿಗಿರಲಿಲ್ಲ. ಲಂಕೆಯ ಉರಿಯು ಅಶೋಕವನಕ್ಕೂ ತಗುಲಿ ಏನು ಅನಾಹುತವಾಯಿತೋ ಎಂದವನು ಹೆದರಿದನು. ಅಷ್ಟರಲ್ಲಿ, ಅಂತರಿಕ್ಷದಲ್ಲಿ ಹೋಗುತ್ತಿದ್ದ ಚಾರಣರೆಂಬ ದೇವತೆಗಳು ಸೀತೆಯು ಸುರಕ್ಷಿತವಾಗಿರುವಳೆಂದು ತಿಳಿಸಿ, ಅವನ ಭಯವನ್ನು ನೀಗಿದರು. ಆದರೂ ಹನುಮಂತನು ತಾನೇ ಪುನಃ ಅಶೋಕವನಕ್ಕೆ ಹೋಗಿ, ಸೀತೆಯು ಸುರಕ್ಷಿತವಾಗಿರುವುದನ್ನು ಕಂಡು ಬಂದು, ಮರಳಿ ಸಮುದ್ರವನ್ನು ಹಾರಿದನು.

# ಸೇತುಬಂಧನ

ಇತ್ತ ಹನುಮಂತನು ಕೃತಕೃತ್ಯನಾಗಿ, ಸಮುದ್ರದ ದಕ್ಷಿಣ ತೀರದಿಂದ ಉತ್ತರ ತೀರವನ್ನು ಕುರಿತು ಹಾರಿದನು. ಅತ್ತ ಉತ್ತರ ತೀರದಲ್ಲಿ ಮಿಕ್ಕ ವಾನರರು ಹನುಮಂತನು ಬರುವುದನ್ನೇ ಕಾಯುತ್ತ ಕುಳಿತಿದ್ದರು. ಸೀತೆಯನ್ನು ಕಂಡು ಬಂದ ಉತ್ಸಾಹದಲ್ಲಿ ಹನುಮಂತನು ಮೇಲಿಂದ ಮೇಲೆ ಮಾಡಿದ ಸಿಂಹನಾದವು ಆ ವಾನರರ ಕಿವಿಗೆ ಬಿತ್ತು. ಎಲ್ಲರೂ ಆಕಾಶದಲ್ಲಿಯೇ ಕಣ್ಣಿಟ್ಟು ಕಾಯುತ್ತ ಕುಳಿತಿದ್ದರು. ಹನುಮಂತನನ್ನು ಕಾಣಲು ಇವರೆಷ್ಟು ತವಕಪಡುತ್ತಿದ್ದರೋ, ಇವರನ್ನು ಕಂಡು ಸೀತಾವೃತ್ತಾಂತವನ್ನು ತಿಳಿಸಲು ಹನುಮಂತನೂ ಅಷ್ಟೇ ಆತುರಪಡುತ್ತಿದ್ದನು. ಶೀಘ್ರದಲ್ಲಿಯೇ ಮಾರುತಿಯು ವಾನರರ ನಡುವೆ ಬಂದು ಇಳಿದನು. ಅವನ ಸಿಂಹನಾದವನ್ನು ಕೇಳಿಯೇ ಅವನು ಹೋದ ಕಾರ್ಯವಾಯಿತೆಂದು ಎಲ್ಲರೂ ಎಣಿಸಿದ್ದರು. ಅವನ ಮುಖ ನೋಡಿಯಂತೂ ಅವರ ಎಣಿಕೆ ದೃಢವಾಯಿತು. ಹಾರಿಬಂದ ಹನುಮಂತನು ಉಸಿರು ಕೂಡಿಸಿಕೊಳ್ಳುವ ಮುಂಚೆಯೇ ಪ್ರತಿಯೊಬ್ಬರೂ ಅವನನ್ನು ಸೀತೆಯ ಸಮಾಚಾರವೇನೆಂದು ಕೇಳುವವರೆ! ಸೀತೆಯ ಸಮಾಚಾರವನ್ನು ಕೇಳಿ ತಿಳಿಯಲು ಅವರಿಗೆ ಎಷ್ಟು ಉತ್ಸಾಹವಿತ್ತೋ, ಅವರಿಗೆ ಆ ಸಮಾಚಾರವನ್ನು ಹೇಳಬೇಕೆಂದು ಹನುಮಂತನಿಗೂ ಅಷ್ಟೇ ಉತ್ಸಾಹವಿತ್ತು. ಸೀತಾವೃತ್ತಾಂತವನ್ನು ಸಾಂಗವಾಗಿ ತಿಳಿಸಲು ಆಂಜನೇಯನು ಒಂದು ಕಡೆ ಕುಳಿತನು. ವಾನರರೆಲ್ಲ ಮೈ ತುಂಬ ಕಿವಿ ಮಾಡಿಕೊಂಡು ಅವನ ಸುತ್ತ ಕುಳಿತರು. ಹನುಮಂತನು ತಾನು ಅವರನ್ನು ಬಿಟ್ಟುದು ಮೊದಲ್ಗೊಂಡು ಲಂಕಿಣಿಯನ್ನು ಭಂಗಿಸಿದುದು, ಸೀತೆಯನ್ನು ಹುಡುಕಿ ಅಶೋಕ ವನದಲ್ಲಿ ಕಂಡುದು, ರಾಮನ ಮುದ್ರೆಯುಂಗುರವನ್ನು ಕೊಟ್ಟು ಅವಳ ಚೂಡಾಮಣಿಯನ್ನು ತಂದುದು, ರಾವಣನ ಬಲಾಬಲಗಳನ್ನು ಪರೀಕ್ಷಿಸಿ ಲಂಕೆಯನ್ನು ಸುಟ್ಟುದೇ ಮೊದಲಾಗಿ ತಾನು ಮರಳಿ ಬರುವ ವರೆಗೆ ನಡೆದುದನ್ನೆಲ್ಲ ಕಣ್ಣಿಗೆ ಕಟ್ಟುವ ಹಾಗೆ ವಿವರಿಸಿದನು.

ಹನುಮಂತನ ವೀರಕಾರ್ಯಗಳನ್ನು ಕೇಳಿ ವಾನರರೆಲ್ಲರೂ ಉಬ್ಬಿದರು. ಆದರೆ ಸೀತೆಯು ಅಸಹಾಯಳಾಗಿ ರಾಕ್ಷಸರ ನಡುವೆ ಬಾಧೆ ಪಡುತ್ತಿರುವುದು ಕೇಳಿ ಸಂಕಟವಾಯಿತು. 'ಸೀತೆಯು ಇರುವ ಸ್ಥಳ ಗೊತ್ತಾಯಿತು.

ಇನ್ನು ಸುಮ್ಮನೆ ಕಾಲವಿಳಂಬವೇಕೆ? ರಾಮನ ಬಳಿಗೆ ಬರಿಗೈಯಲ್ಲಿ ಹೋಗುವ ಬದಲು, ನಾನೇ ಲಂಕೆಗೆ ಹೋಗಿ ಸೀತಾದೇವಿಯನ್ನು ಕರೆದುತಂದು ಒಪ್ಪಿಸುತ್ತೇನೆ' ಎಂದು ಅಂಗದನು ಎದ್ದು ನಿಂತನು. ಆದರೆ ಅವರೆಲ್ಲರಿಗೂ ಹಿರಿಯನಾದ ಜಾಂಬವಂತನು ಅಂಗದನ ಗಮನಕ್ಕೆ ಅಪ್ಪಣೆ ಕೊಡಲಿಲ್ಲ. ಒಡೆಯನಾದ ರಾಮನ ಆಜ್ಞೆಯನ್ನು ಪಡೆಯದೆ ಉತ್ಸಾಹದ ಭರದಲ್ಲಿ ಯಾವುದನ್ನೂ ದುಡುಕಿ ಮಾಡಬಾರದೆಂದು ಅಂಗದನನ್ನು ತಡೆದನು. ಅಂಗದನು ಅವನ ಮಾತನ್ನು ಕೇಳಲೇಬೇಕಾಯಿತು. ರಾಮನಿಗೆ ಸೀತೆ ಸಿಕ್ಕಿದ ಸುದ್ದಿಯನ್ನು ತಿಳಿಸಿ, ಮುಂದಿನ ಕರ್ತವ್ಯವನ್ನು ಅವನಿಂದಲೇ ಕೇಳಿ ತಿಳಿಯಬೇಕೆಂದು ಎಲ್ಲರೂ ಕಿಷ್ಕಿಂಧೆಯನ್ನು ಕುರಿತು ಹೊರಟರು.

ಹೀಗೆ ಹೊರಟ ವಾನರರಿಗೆ ನಡು ದಾರಿಯಲ್ಲಿ ಒಂದು ಮಧುವನ ಸಿಕ್ಕಿತು. ಅಲ್ಲಿಯ ಹಣ್ಣು ಹಂಪಲುಗಳೂ ಅಲ್ಲಿಯ ಜೇನುತುಪ್ಪವೂ ಅಸಾಮಾನ್ಯವಾದುದು ಹೊರಟ ಕೆಲಸವನ್ನು ತೃಪ್ತಿಕರವಾಗಿ ನೆರವೇರಿಸಿ ಸಂತುಷ್ಟರಾದ ವಾನರರಿಗೆ ಆ ಮಧುವನವನ್ನು ಸೂರೆಮಾಡುವ ಚಪಲ ಹುಟ್ಟಿತು. ಆದರೆ ಆ ತೋಟವು ಸುಗ್ರೀವನಿಗೆ ಸೇರಿದುದು. ಸುಗ್ರೀವನಿಗೆ ತನ್ನ ಮಧುವನವೆಂದರೆ ಪ್ರಾಣ. ಆದರಿಂದ ಮಧುವನವನ್ನು ಪ್ರವೇಶಿಸಲು ಅವರು ಹೆದರಿದರು. ಆದರೂ ಆ ತೋಟದಲ್ಲಿ ಮನಸ್ಸು ಬಂದಂತೆ ರಮಿಸಬೇಕೆಂದು ತವಕಿಸುತ್ತಿದ್ದರು. ಜೊತೆಯಲ್ಲಿಯೇ ಇದ್ದ ಯುವರಾಜನಾದ ಅಂಗದನು ಆವರ ಅಭೀಷ್ಟವನ್ನು ತಿಳಿದನು. ಅವರ ಇಷ್ಟವನ್ನು ಆ ಸಮಯದಲ್ಲಿ ನೆರವೇರಿಸುವುದು ಸಾಧುವೆಂದು ಅವನಿಗೆ ತೋರಿತು. ಅವನ ಅನುಮತಿಯ ಮೇರೆ ವಾನರರೆಲ್ಲರೂ ಮಧುವನಕ್ಕೆ ನುಗ್ಗಿದರು. ನುಗ್ಗಿ ತೃಪ್ತಿಯಾಗುವವರೆಗು ಅಲ್ಲಿ ಸಿಕ್ಕಿದುದನ್ನೆಲ್ಲ ತಿಂದು ತೇಗಿ, ಕಪಿಸಹಜವಾದ ತಮ್ಮ ಚೇಷ್ಟೆಗಳನ್ನು ಪ್ರಾರಂಭಿಸಿದರು. ನಂದನವನದಂತಿದ್ದ ಮಧುವನವು ಪಾಳು ನೆಲದಂತಾಯಿತು. ತಡೆಯಲು ಬಂದ ವನಪಾಲಕರೆಲ್ಲ ಕಪಿಗಳ ಕೈಲಿ ಭಂಗಪಟ್ಟು ಓಡಿಹೋದರು. ಸುಗ್ರೀವನ ಸೋದರ ಮಾವನಾದ ದಧಿಮುಖನೆಂಬವನು ಆ ವನದ ಮುಖ್ಯ ರಕ್ಷಕನಾಗಿದ್ದನು. ವಾನರರಿಗೆ ಒಂದು ಕಡೆ ಸೀತೆಯನ್ನು ಹುಡುಕಿ ಕಂಡ ಸಂತೋಷ, ಇನ್ನೊಂದು ಕಡೆ ತಿಂದು ಕುಡಿದು ಏರಿದ ಮದ. ಆ ಸ್ಥಿತಿಯಲ್ಲಿ ದಧಿಮುಖನು ಸುಗ್ರೀವನ ಸೋದರಮಾವನೆಂಬುದನ್ನೂ ಲೆಕ್ಕಿಸದೆ

ಅವನನ್ನೂ ಹಿಡಿದು ಹಿಂಸಿಸಿ ಓಡಿಸಿಬಿಟ್ಟರು. ದಧಿಮುಖನಿಗೆ ಮಧುವನದ ನಾಶ ನೋಡಿ ಸಂಕಟವಾಯಿತು. ತನಗೆ ಸೋಲಾದುದು ಕಂಡು ಕೋಪ ಬಂತು, ಅವಮಾನವಾಯಿತು. ಸಾಲದುದಕ್ಕೆ ಕಪಿಗಳ ಹಾವಳಿಯನ್ನು ತಡೆಯುವುದು ಬಿಟ್ಟು ಹನುಮಂತ ಅಂಗದರೇ ಅವರನ್ನು ಪ್ರೋತ್ಸಾಹಿಸುತ್ತಿದ್ದರು. ಅದು ಕಂಡ ಮೇಲಂತೂ ದಧಿಮುಖನ ಸ್ಥೈರಣೆ ನಾಶವಾಯಿತು. ಅವರಿಗೆಲ್ಲ ತಕ್ಕುದು ಮಾಡಿಸುತ್ತೇನೆಂದು ನೇರಾಗಿ ಕಿಷ್ಕಿಂಧೆಗೆ ಬಂದನು. ಅಲ್ಲಿ ಸುಗ್ರೀವನನ್ನು ಕಂಡು, ಕಪಿಗಳ ಔದ್ಧತ್ಯವನ್ನೂ, ಮಧುವನದ ನಾಶವನ್ನೂ, ತನ್ನ ಪರಾಭವವನ್ನೂ ನಿವೇದಿಸಿಕೊಂಡನು.

ಹಿಂದೆಂದೂ ಕಾಣದ ಕಪಿಗಳ ಅಂದಿನ ವರ್ತನೆಯನ್ನು ಕಂಡು ಸುಗ್ರೀವನಿಗೆ ಆಶ್ಚರ್ಯವಾಯಿತು. ಆ ವಿಚಿತ್ರ ಚರ್ಯೆಗೆ ಕಾರಣವೇನಿರಬಹುದೆಂದು ಸಾವಧಾನವಾಗಿ ಯೋಚಿಸಿದನು. ಕಪಿಗಳು ಸೀತೆಯನ್ನು ಹುಡುಕಿ ಸುದ್ದಿ ತರುವುದಕ್ಕಾಗಿ ಹೋದವರು. ತಾನು ಅವರಿಗೆ ಕೊಟ್ಟಿದ್ದ ಅವಧಿಯೂ ಮುಗಿಯುತ್ತ ಬಂದಿತ್ತು. ಅಂತಹ ಸಮಯದಲ್ಲಿ ತನ್ನ ಪ್ರೀತಿಯ ಮಧುವನದಲ್ಲಿ ಕುಣಿದು ಕುಪ್ಪಳಿಸಿ ಹಾವಳಿ ಮಾಡುವ ಧೈರ್ಯ ಅವರಿಗೆ ಹೇಗೆ ಬಂದಿತು? ಅಲ್ಲದೆ ಜೊತೆಯಲ್ಲಿ ಯುವರಾಜನಾದ ಅಂಗದನೂ ಕರ್ತವ್ಯ ಪರಾಯಣರಾದ ಹನುಮಂತ ಜಾಂಬವಂತರೂ ಇದ್ದಾರೆ. ಅವರು ಕೂಡ ಮಧುವನವನ್ನು ಪ್ರವೇಶಿಸಿ ಮಿಕ್ಕವರನ್ನು ಪ್ರೋತ್ಸಾಹಿಸಿದರೇಕೆ? ರಾಜನಾದ ಸುಗ್ರೀವನ ಕೋಪವು ಅವರ ಗಮನಕ್ಕೆ ಬರಲಿಲ್ಲವೆ? ಇಲ್ಲ, ಹೋದ ಕಾರ್ಯವನ್ನು ನೆರವೇರಿಸಿ ಬಂದು, ಆ ಸಂಭ್ರಮದಲ್ಲಿ ಈ ಪ್ರಮೋದಕ್ಕೆ ಮನ ಮಾಡಿದರೆ? ಇರಬೇಕು. ಇಲ್ಲದಿದ್ದರೆ, ಕೆಲಸ ಕೈಗೂಡದೆ ಬಂದು ಮಧುವನವನ್ನು ಪ್ರವೇಶಿಸುವ ಧೈರ್ಯವೆಲ್ಲಿಂದ ಬರಬೇಕು? ಪ್ರಾಜ್ಞನಾದ ಆಂಜನೇಯನೇ ಈ ಹಾವಳಿಗೆ ಮುಂದಾಳಾಗಿರುವಾಗ ಕೆಲಸ ಕೈಗೂಡಿರಲೇಬೇಕು.

ಹೀಗೆ ಯೋಚಿಸುತ್ತ, ಹನುಮಂತನು ಸೀತೆಯನ್ನು ಕಂಡೇ ಬಂದಿರುವನೆಂದು ಸುಗ್ರೀವನು ತರ್ಕಿಸಿದನು. ಮಧುವನ ಹೋದರೆ ಹೋಯಿತು, ಸಖನಾದ ರಾಮನಿಗೆ ಸೀತಾವೃತ್ತಾಂತ ದೊರಕಿತಲ್ಲಾ ಎಂದು ಹಿಗ್ಗಿದನು. ದಧಿಮುಖನನ್ನು ಸಂತೈಸಿ, ಕಪಿಗಳೆಲ್ಲರನ್ನೂ ಮನ್ನಿಸಿ ಕರೆದು ತಾರೆಂದು ಅವನನ್ನು ಕಳುಹಿಸಿಕೊಟ್ಟನು.

ರಾಜಾಜ್ಞೆಯನ್ನು ಕೇಳಿ ವಾನರರೆಲ್ಲರೂ ತ್ವರಿತ ಗಮನದಿಂದ ಕಿಷ್ಕಿಂಧೆಗೆ ಬಂದರು. ಸುಗ್ರೀವನೂ ರಾಮ ಲಕ್ಷ್ಮಣರೂ ಅವರನ್ನು ಆದರದಿಂದ ಬರ ಮಾಡಿಕೊಂಡು ಸೀತೆಯ ಸಮಾಚಾರವೇನೆಂದು ಪ್ರಶ್ನಿಸಿದರು ಹನುಮಂತನು ತಾನು ಸೀತೆಯನ್ನು ಕಂಡುದಾಗಿ ತಿಳಿಸಿ, ಅವಳ ಸ್ಥಿತಿಯನ್ನೂ, ಅವಳಾಡಿದ ಮಾತು ಕತೆಗಳೆಲ್ಲವನ್ನೂ ರಾಮನಿಗೆ ನಿವೇದಿಸಿದನು. ಅವಳನ್ನು ತಾನು ಕಂಡು ಬಂದುದಕ್ಕೆ ನಿದರ್ಶನವಾಗಿ, ಅವಳ ಚೂಡಾಮಣಿಯನ್ನು ಒಪ್ಪಿಸಿ, ಅವಳು ತಿಳಿಸಿದ್ದ ಕೆಲವು ಅಂತರ್ಯಗಳನ್ನೂ ನಿವೇದಿಸಿದನು. ಆ ಚೂಡಾ ಮಣಿಯನ್ನು ಕಂಡು ರಾಮನಿಗೆ ಸಹಜವಾಗಿ ದುಃಖ ಉಕ್ಕಿ ಬಂತು. ಹಿಂದಿ ನದನ್ನೆಲ್ಲ ನೆನೆದು ಗೋಳಾಡಿದನು. ಕಡೆಗೆ ಸುಗ್ರೀವ ಲಕ್ಷ್ಮಣರ ಸಮಾಧಾನ ಗಳಿಂದ ಮನಸ್ಸನ್ನು ಸ್ತಿಮಿತ ಮಾಡಿಕೊಂಡು ಮುಂದಿನ ಕಾರ್ಯವೇನೆಂದು ಆಲೋಚಿಸತೊಡಗಿದನು.

ಸೀತೆಯು ಎಲ್ಲಿರುವಳೆಂಬುದು ಗೊತ್ತಾಯಿತು. ಹನುಮಂತನು ವಿವ ರಿಸಿದ ರಾಕ್ಷಸರ ಬಲಾಬಲಗಳನ್ನು ನೋಡಿದರೆ, ರಾವಣನನ್ನು ಗೆಲ್ಲುವುದು ಕೂಡ ಸಾಧ್ಯ. ಆದರೆ ಆದರ ಸಾಧನೆಗೆ ಅಡ್ಡ ನಿಂತುದು ಅಪಾರವಾದ ಸಮುದ್ರ. ಆ ಸಮುದ್ರವನ್ನು ದಾಟಿ ತನ್ನ ವಾನರ ಸೇನೆಯೊಡನೆ ಲಂಕೆ ಯನ್ನು ಸೇರುವುದು ಹೇಗೆ ಸಾಧ್ಯವೆಂದು ರಾಮನಿಗೆ ಶಂಕೆ ಹುಟ್ಟಿತು. ರಾವಣನನ್ನು ಕೊಂದು ಸೀತೆಯನ್ನು ಕರೆತರುವ ಆಸೆ ಕೈಗೂಡುವುದು ಬಹು ದೂರವಾಗಿ ಕಂಡಿತು. ಆದರೆ ರಾಮನ ಅಧೈರ್ಯವನ್ನು ನೀಗಿ ಅವನಿಗೆ ಉತ್ಸಾಹ ಹುಟ್ಟಿಸಲು ಬಳಿಯಲ್ಲಿ ಸುಗ್ರೀವನಿದ್ದನು. ಈ ಅಲ್ಪ ವಿಷಯಕ್ಕಾಗಿ ರಾಮನು ನಿರಾಶನಾಗಬೇಕೆ? ಸಮುದ್ರರಾಜನನ್ನು ಪ್ರಾರ್ಥಿಸಿದರೆ ಆತನು ಲಂಕೆಗೆ ದಾರಿ ಬಿಟ್ಟುಕೊಡಲಾರನೆ? ಹಾಗೆ ಅವನು ಆ ಪ್ರಾರ್ಥನೆಯನ್ನು ಲಾಲಿಸದಿದ್ದರೆ, ಸುಗ್ರೀವನ ಅಖಂಡ ವಾನರಸೇನೆಯು ಸಮುದ್ರಕ್ಕೆ ಸೇತುವೆ ಹಾಕಲಾರದೆ? ಶ್ರೀರಾಮಚಂದ್ರನಿಗೆ ಈ ಸಮುದ್ರ ತರಣದ ವಿಚಾರದಲ್ಲಿ ಕೊಂಚವೂ ಯೋಚನೆಯಿರಬೇಕಾಗಿಯೇ ಇಲ್ಲ.

ಸುಗ್ರೀವನ ಮಾತು ಕೇಳಿ ರಾಮನಿಗೆ ಸಮಾಧಾನವಾಯಿತು. ಕೂಡಲೆ ಪ್ರಯಾಣ ಮಾಡಲು ಸಿದ್ಧನಾದನು. ಸುಗ್ರೀವನು ಕೂಡ ತನ್ನ ಕೋತಿ ಕರಡಿಗಳ ಮಹಾ ಸೇನೆಯನ್ನು ಸುವ್ಯವಸ್ಥೆಯಿಂದ ತಂದು ನಿಲಿಸಿ, ರಾಮನ

ಸಹಾಯಕ್ಕೆ ಅನುವಾದನು. ಸೇನೆ ಕೂಡ ಯುದ್ಧೋತ್ಸಾಹದಿಂದ ಸೇರಿ, ಎಷ್ಟು ವೇಳೆಗೆ ಲಂಕೆ ಮುಟ್ಟಿ ರಾಕ್ಷಸರೊಡನೆ ಕಾಳಗ ಮಾಡೇವು ಎಂದು ತವಕಿಸುತ್ತಿತ್ತು. ಆ ಎಲ್ಲರ ಆಸೆ ಉತ್ಸಾಹಗಳಿಗೆ ಸರಿಯಾಗಿ ಸಮರಪ್ರಯಾಣಕ್ಕೆ ತಕ್ಕ ಸುಮುಹೂರ್ತವೂ ಬಂದೊಗಿತು. ಅದೇ ಸಮಯದಲ್ಲಿ ತೋರಿ ಬಂದ ಅನೇಕ ಶುಭ ನಿಮಿತ್ತಗಳಿಗೆ ಹರ್ಷಗೊಂಡು, ಎಲ್ಲರೂ ಇನ್ನಿಲ್ಲದ ಉತ್ಸಾಹದಿಂದ ಮುಂದೆ ಸಾಗುತ್ತ, ಸಮುದ್ರದ ಉತ್ತರತೀರಕ್ಕೆ ಬಂದು ಬೀಡು ಬಿಟ್ಟರು.

ಹೀಗೆ ಇಲ್ಲಿ ರಾಮ ಲಕ್ಷ್ಮಣರೂ ಸುಗ್ರೀವಸೇನೆಯೂ ಯುದ್ಧಕ್ಕಾಗಿ ಹುಮ್ಮಸಿನಿಂದ ಬರುತ್ತಿದ್ದರೆ, ಅಲ್ಲ ಲಂಕೆಯಲ್ಲಿ ರಾವಣನ ಪರಿಸ್ಥಿತಿಯೇ ಬೇರೆಯಾಗಿತ್ತು. ಒಂದು ಸಾಮಾನ್ಯ ಕಪಿ ಬಂದು, ಅನೇಕಾನೇಕ ವೀರ ರಾಕ್ಷಸರನ್ನೂ, ತನ್ನ ಮಗನಾದ ಪರಾಕ್ರಮಿ ಅಕ್ಷಯಕುಮಾರನನ್ನೂ ಸದೆದು, ಅಶೋಕವನವನ್ನು ಹಾಳುಮಾಡಿ, ಲಂಕೆಯನ್ನು ಸುಟ್ಟು, ತನ್ನನ್ನೇ ಹೆದರಿಸಿ ಹೋದುದು ಕಂಡು ರಾವಣನಿಗೆ ಬಹು ದಿಗಿಲಾಗಿತ್ತು. ದೂತನಾದ ಕಪಿಯೇ ಇಷ್ಟು ಅನಾಹುತ ನಡೆಸಿರುವಾಗ, ಒಡೆಯರೇ ಬಂದರೆ ಏನಾದೀತೋ ಎಂದು ಅಂಜಿದನು. ಅದಕ್ಕಾಗಿ ಮುಂದೆ ಶತ್ರುಗಳು ದಂಡೆತ್ತಿ ಬರುವ ಮುಂಚೆಯೇ ತಾನು ಮಾಡಬೇಕಾದ ಯುದ್ಧಸನ್ನಾಹಗಳನ್ನು ಕುರಿತು ಮಂತ್ರಣ ನಡೆಸಲು ತನ್ನ ಮಂತ್ರಿಗಳನ್ನು ಕರೆದನು. ಮಂತ್ರಿಗಳು ಶತ್ರುಬಲವೇನೆಂಬುದನ್ನು ತಿಳಿಯದೆಯೆ ರಾವಣನನ್ನು ಮುಖಸ್ತುತಿ ಮಾಡಲು ಅವನ ಪರಾಕ್ರಮವನ್ನೇ ಒಂದು ಹತ್ತು ಮಾಡಿ ಹೊಗಳಿದರು. ಅವನ ಸೇನಾಪತಿಗಳು ತಮ್ಮಂತಹ ವೀರರಿರುವಾಗ ರಾವಣನಿಗೆ ಜಯ ಹೊರತು, ಅಪಜಯದ ನೆರಳು ಕೂಡ ಇಲ್ಲವೆಂದರು. ಪ್ರತಿಯೊಬ್ಬ ರಾಕ್ಷಸನೂ ನಾನು ತಾನೆಂದು ಮುಂದೆ ಬಂದು ರಾವಣನ ಸೇವೆಗೆ ತನ್ನ ಜೀವವನ್ನು ಮೀಸಲಿಟ್ಟನು. ಹೀಗೆ ಅವರೆಲ್ಲರ ಮಾತು ಕೇಳಿ ರಾವಣನ ಧೈರ್ಯ ಕುದುರಿತು. ಆದರೆ ಹೀಗೆಲ್ಲರೂ ರಾವಣನಿಗೆ ದುರ್ಮಂತ್ರವನ್ನೇ ಬೋಧಿಸುತ್ತಿರುವಾಗ, ಅವನಿಗೆ ಹಿತವಾದ ಹೇಳಲು ವಿಭೀಷಣನೊಬ್ಬನು ಮಾತ್ರ ಎದ್ದು ನಿಂತನು. ಪರಸ್ತ್ರೀಯರನ್ನು ಕದ್ದು ತರುವುದು ಎಂತಹ ಪಾಪವೆಂದು ವಿವರಿಸಿದನು. ಶ್ರೀರಾಮನು ಜನಸ್ಥಾನದಲ್ಲಿಯೂ, ಅವನ ಕಿಂಕರನಾದ ಹನುಮಂತನು ಲಂಕೆಯಲ್ಲಿಯೂ ನಡೆಸಿದ

ಅದ್ಭುತ ಸಾಹಸ ಕಾರ್ಯಗಳನ್ನು ಕೇಳುವವರ ಮೈಯಲ್ಲಿ ನಡುಕ ಹುಟ್ಟು ವಂತೆ ವರ್ಣಿಸಿದನು. ಅಲ್ಲದೆ, ಸೀತೆಯನ್ನು ತಂದಂದಿನಿಂದ ಲಂಕೆಯಲ್ಲಿ ಆಗುತ್ತಿದ್ದ ದುರ್ನಿಮಿತ್ತಗಳನ್ನೆಲ್ಲ ಚೆನ್ನಾಗಿ ತಿಳಿಯಹೇಳಿದನು. ತಮ್ಮನ ಮಾತು ಕೇಳಿ ರಾವಣನ ಮನಸ್ಸು ಕದಲಿತು. ಆದರೂ ಅವನಿಗೆ ಸೀತೆ ಯನ್ನು ಬಿಟ್ಟುಬಿಡಲು ಮನಸ್ಸಾಗಲಿಲ್ಲ ಪುನಃ ಮಂತ್ರಿಗಳೊಡನೆ ಆಲೋ ಚಿಸಿದನು. ಸೀತೆಯನ್ನು ಒಪ್ಪಿಸದೆಯೇ ರಾಮನನ್ನು ಜಯಿಸುವ ಉಪಾಯ ಅವನಿಗೆ ಬೇಕಾಗಿತ್ತು. ಅಣ್ಣನ ಅಸಹಾಯತೆ ಕಂಡು ಕುಂಭಕರ್ಣನು ತನ್ನ ಸೇವೆಯನ್ನು ನೀಡಿದನು. ತಾನೊಬ್ಬನೇ ರಾಮನನ್ನೂ ಅವನ ಕಪಿಗಳನ್ನೂ ಧ್ವಂಸಮಾಡುವೆನೆಂದನು. ಸೀತೆಯನ್ನು ಬಲಾತ್ಕಾರದಿಂದ ಮದುವೆಯಾ ಗೆಂದು ಮಂತ್ರಿಗಳು ಸಲಹೆ ಕೊಟ್ಟರು. ಆದರೆ ಹೆಂಗಸರನ್ನು ಬಲಾತ್ಕರಿಸ ಲಾಗದೆಂದು ರಾವಣನಿಗೆ ಬ್ರಹ್ಮನ ಶಾಪವಿತ್ತು.

ವಿಭೀಷಣನಿಗೆ ಅವರ ಸಲಹೆಗಳನ್ನೆಲ್ಲ ಕೇಳಿ ಅಯ್ಯೋ ಎನಿಸಿತು. ಅಣ್ಣನು ಕೆಡದಂತೆ ಅವನಿಗೆ ಮತ್ತೊಮ್ಮೆ ಹಿತವಾದ ಹೇಳಿದನು. ಆದರೆ ಅಷ್ಟು ಜನರ ದುರ್ಬೋಧೆಯ ನಡುವೆ ವಿಭೀಷಣನೊಬ್ಬನ ಬುದ್ಧಿವಾದವು ರಾವಣನಿಗೆ ರುಚಿಸಲಿಲ್ಲ. ಇಂದ್ರಜಿತ್ತು ರಾವಣನಿಗೆ ತಕ್ಕ ಮಗ. ಅವನಿಗೆ ಕೂಡ ವಿಭೀಷಣನ ಮತ ಸರಿ ಬೀಳಲಿಲ್ಲ. ತಂದೆ ಮಕ್ಕಳಿಬ್ಬರೂ ಒಂದಾಗಿ ವಿಭೀಷಣನನ್ನು ಹೇಡಿಯೆಂದೂ ಹಳಿದು, ಬಹುವಾಗಿ ಹೀನೈಸಿ ಅವಮಾನ ಪಡಿಸಿದರು. ಆ ಮಹಾ ರಾಕ್ಷಸ ಸಭೆಯಲ್ಲಿ ವಿಭೀಷಣನೊಬ್ಬನೇ ಒಂದು. ಮಿಕ್ಕ ರಾಕ್ಷಸರೆಲ್ಲ ಒಂದು. ವಿಭೀಷಣನ ನಾಲ್ಕು ಮಂದಿ ಮಂತ್ರಿಗಳು ಮಾತ್ರ ತಮ್ಮ ಸ್ವಾಮಿಯ ಸಲಹೆಯನ್ನೇ ಅನುಮೋದಿಸಿದರು. ಹೀಗೆ ಎಲ್ಲರೂ ರಾವಣನ ಮಾತನ್ನೇ ಬಲಪಡಿಸಿ ತನ್ನ ಮಾತಿಗೆ ಕಿವಿ ಕೊಡದಿದ್ದು ದನ್ನು ವಿಭೀಷಣನು ನೋಡಿದನು. ಅಂತಹ ಮೂರ್ಖ ದುರ್ಮಾರ್ಗಿಗಳ ಸಹವಾಸದಲ್ಲಿಯೇ ನಿಂತರೆ ತನಗೂ ಹಾನಿ ತಟ್ಟುವುದೆಂದು ತಿಳಿದನು. ಅಧರ್ಮಿಗಳ ಜೊತೆಯಲ್ಲಿದ್ದು ನಾಶವಾಗುವುದಕ್ಕಿಂತ, ಧರ್ಮಾತ್ಮನಾದ ರಾಮನ ಬಳಿ ಸೇರಿ ಅವನಿಗೆ ಶರಣಾಗತನಾಗುವುದೇ ಶ್ರೇಯಸ್ಕರವೆಂದು ತೋರಿತು. ರಾವಣನು ಸ್ವಕೀಯನಾಗಿ ರಾಮನು ಪರಕೀಯನಾದರೂ, ಧರ್ಮಕ್ಕೆ ನೆರವಾಗಿ ಅಧರ್ಮವನ್ನು ಅಡಗಿಸುವುದೇ ಒಳ್ಳೆತೆಂದು ಎಣಿಸಿ,

ವಿಭೀಷಣನು ರಾಮನಿಗೆ ಶರಣಾಗತನಾಗಲು ಹೊರಟನು. ಹೀಗೆ ರಾವಣನ ಆಸ್ಥಾನದಿಂದ ಹೊರಡುವಾಗಲೂ ತಾನು ಹಿಂದೆ ಹೇಳಿದ ಬುದ್ಧಿವಾದವನ್ನು ಮತ್ತೊಮ್ಮೆ ಹೇಳಿದನು. ರಾವಣನು ಕೇಳಲಿಲ್ಲ. ಬೇರೆ ಉಪಾಯಗಾಣದೆ ರಾಮನ ಬಳಿಗೆ ಹೊರಟ ವಿಭೀಷಣನ ಹಿಂದೆಯೇ ಅವನ ನಾಲ್ವರು ಮಂತ್ರಿಗಳೂ ಹೊರಟರು.

ಹೀಗೆ ವಿಭೀಷಣನೂ ಅವನ ನಾಲ್ವರು ಮಂತ್ರಿಗಳೂ ಅಂತರಿಕ್ಷ ಮಾರ್ಗವಾಗಿ ತಮ್ಮ ಪಾಳಯಕ್ಕೆ ಬರುತ್ತಿರುವುದನ್ನು ಸುಗ್ರೀವನು ನೋಡಿದನು. ರಾವಣನು ಕಳುಹಿಸಿದ ಗೂಢಚಾರರವರಿರಬಹುದೆಂದು ಅವನಿಗೆ ತೋರಿತು. ಮರುಕ್ಷಣದಲ್ಲಿಯೇ ಆ ರಾಕ್ಷಸರ ಆಗಮನದ ಸುದ್ದಿ ಸೇನೆಯಲ್ಲೆಲ್ಲ ಹಬ್ಬಿತು. ರಾಕ್ಷಸರೆಂಬ ಮಾತು ಕೇಳಿ ಎಲ್ಲರೂ ಕೈಗೆ ಸಿಕ್ಕಿದುದನ್ನು ಆಯುಧವಾಗಿ ಹಿಡಿದು ಯುದ್ಧ ಸನ್ನದ್ಧರಾದರು. ಆದರೂ ವಿಭೀಷಣನು ಅವರ ಸನ್ನಾಹಗಳಿಗೆ ಹೆದರದೆ ಮುಂದೆ ಬಂದನು. ಬಂದು, ಗಗನದಲ್ಲಿಯೆ ನಿಂತು, ತಾನು ರಾಮನಿಗೆ ಶರಣಾಗತನಾಗಿ ಬಂದವನೆಂದು ತಿಳಿಸಿದನು. ತನ್ನ ಅಣ್ಣನಾದ ರಾವಣನ ಮೂರ್ಖತನವನ್ನೂ, ಮಂತ್ರಿಗಳ ದುರ್ಮಂತ್ರಕ್ಕೆ ಕಿವಿಗೊಟ್ಟು ತನ್ನ ಬುದ್ಧಿವಾದವನ್ನು ನಿರಾಕರಿಸಿದುದನ್ನೂ, ಅವರ ಸಹವಾಸದಲ್ಲಿದ್ದು ನಾಶವಾಗುವುದಕ್ಕಿಂತ ರಾಮನ ಸೇವೆಮಾಡಿ ಉದ್ಧಾರವಾಗುವುದೇ ಶ್ರೇಯಸ್ಕರವೆಂದು ತಾನು ಬಂದುದನ್ನೂ ತಿಳಿಸಿ, ಮತ್ತೆಯೂ ರಾಮನಿಗೆ ಶರಣೆಂದನು.

ಬಂದವನು ರಾವಣನ ತಮ್ಮನೆಂಬುದನ್ನು ತಿಳಿದ ಮೇಲಂತೂ ಸುಗ್ರೀವನ ಅನುಮಾನ ಸ್ಥಿರವಾಯಿತು. ವಿಭೀಷಣನನ್ನು ತಮ್ಮಲ್ಲಿ ಸೇರಿಸಿಕೊಳ್ಳುವ ಬದಲು ಆ ರಾಕ್ಷಸನನ್ನು ಹತಮಾಡಬೇಕೆಂದು ಸೂಚಿಸಿದನು. ಅದೇ ಮಾತನ್ನೇ ವಾನರರೆಲ್ಲರೂ ಅನುಮೋದಿಸಿದರು. ಆದರೆ ಶರಣಾಗತನೆಂದು ಬಂದವನನ್ನು ತಿರಸ್ಕರಿಸಿ ಓಡಿಸುವುದು ರಾಮನ ಧರ್ಮವಾಗಿರಲಿಲ್ಲ. ವಿಭೀಷಣನ ಸಮಸ್ತ ವೃತ್ತಾಂತವನ್ನೂ ಅವನ ಮುಖದಿಂದಲೇ ಕೇಳಿ ತಿಳಿದನು. ಅವನಿಗೆ ರಕ್ಷಣೆ ನೀಡುವ ವಿಚಾರದಲ್ಲಿ ವಾನರರೆಲ್ಲರ ಅಭಿಪ್ರಾಯವನ್ನೂ ಕೇಳಿದನು. ರಾವಣನ ತಮ್ಮನು ತ್ರಿಕರಣಪೂರ್ವಕವಾಗಿ ತಮ್ಮ ಸಹಾಯಕ್ಕೆ ಬಂದನೆಂಬುದನ್ನು ಆ ವಾನರರು ನಂಬಲಿಲ್ಲ. ಆದರೆ ಮಹಾಪ್ರಾಜ್ಞನಾದ

ಆಂಜನೇಯನು ಮಾತ್ರ, ಶ್ರೀರಾಮನ ಶರಣಾಗತ ರಕ್ಷಣದ ಮತವನ್ನು ಪುಷ್ಟೀಕರಿಸಿ ಮಾತನಾಡಿದನು. ಅನಂತರ ರಾಮನು ಯುಕ್ತವಾದ ಮಾತುಗಳಿಂದ ವಾನರರ ಭಯ ಸಂದೇಹಗಳನ್ನು ನೀಗಿದನು. ವಿಭೀಷಣನನ್ನು ಬರಮಾಡಿಕೊಳ್ಳುವುದಕ್ಕೆ ವಾನರರೆಲ್ಲರೂ ಒಪ್ಪಿದರು. ಸುಗ್ರೀವನು ವಿಭೀಷಣನನ್ನು ತಾನೇ ಆದರಿಸಿ ಬರಮಾಡಿಕೊಂಡನು. ಪರಸ್ಪರ ಹೆಚ್ಚು ಪರಿಚಯವಾದ ಮೇಲೆ, ವಿಭೀಷಣನು ರಾಮನಿಗೆ ನೆರವಾಗುವುದಾಗಿ ಮಾತು ಕೊಟ್ಟನು. ರಾಮನು ಅಲ್ಲಿಯ ಸಮುದ್ರದ ಪುಣ್ಯೋದಕವನ್ನು ತಂದು, ಸಮಸ್ತ ವಾನರರ ನಡುವೆ ವಿಭೀಷಣನಿಗೆ ಲಂಕಾರಾಜ್ಯದ ಪಟ್ಟವನ್ನು ಕಟ್ಟಿದನು.

ಮುಂದೆ ಎಲ್ಲರ ಮನಸ್ಸೂ ಯುದ್ಧದ ಕಡೆ ತಿರುಗಿತು. ಲಂಕಾನಗರದ ದುರ್ಗಾದಿ ರಕ್ಷಣೆಗಳನ್ನೂ, ರಾವಣನ ಸೈನ್ಯದ ಬಲಾಬಲಗಳನ್ನೂ, ಶತ್ರು ಸೈನ್ಯದ ಅನೇಕ ರಹಸ್ಯಗಳನ್ನೂ ವಿಭೀಷಣನು ರಾಮನಿಗೆ ತಿಳಿಸಿದನು. ಆದರೆ ಯುದ್ಧಕ್ಕೆ ತೊಡಗುವ ಮುಂಚೆ ಎದುರಿನ ಮಹಾ ಸಮುದ್ರವನ್ನು ದಾಟುವುದೊಂದು ಮಾತ್ರ ಉಳಿದಿತ್ತು. ಅದನ್ನು ಸಾಧಿಸಲು ರಾಮನು ಸಮುದ್ರರಾಜನನ್ನು ಪ್ರಾರ್ಥಿಸುವುದೊಂದೇ ದಾರಿಯೆಂದು ವಿಭೀಷಣನು ಸೂಚಿಸಿದನು. ಆ ಸೂಚನೆಯಂತೆ ರಾಮನು ಮೂರು ದಿನ ಸಮುದ್ರತೀರದಲ್ಲಿಯೇ ದರ್ಭಶಯನದಲ್ಲಿ ಮಲಗಿ ಸಮುದ್ರನ ನೆರವಿಗಾಗಿ ಪ್ರಾರ್ಥಿಸಿದನು. ಮೂರು ದಿನ ಆರಾಧಿಸಿದರೂ ಸಮುದ್ರನು ಪ್ರಸನ್ನನಾಗದಿರುವುದು ಕಂಡು ರಾಮನಿಗೆ ಕೋಪ ಬಂದಿತು. ಸಮುದ್ರವನ್ನೇ ಶೋಷಿಸಿ ಬಿಡುವೆನೆಂದು ಬಿಲ್ಲಿಗೆ ಬಾಣ ಹೂಡಿ ನಿಂತನು. ಅವನ ಕೋಪವನ್ನು ಯಾರೂ ತಡೆಯುವಂತಿರಲಿಲ್ಲ. ಅವನು ಪ್ರಯೋಗಿಸಿದ ಬಾಣಹತಿಗೆ ಸಮುದ್ರವು ಅನೇಕ ಯೋಜನ ದೂರ ಹಿಂಜರಿಯಿತು. ಆದರೂ ಅಷ್ಟು ಬಾಣಗಳ ಏಟು ಬಿದ್ದರೂ ಸಮುದ್ರನು ಪ್ರತ್ಯಕ್ಷನಾಗಲಿಲ್ಲ. ಹೀಗೆ ಗರ್ವದಿಂದ ಮುಂದೆ ಬರದೆ ನಿಂತ ಸಮುದ್ರನಿಗೆ ತಕ್ಕುದನ್ನು ಮಾಡಬೇಕೆಂದು ರಾಮನು ಅಮೋಘವಾದ ಬ್ರಹ್ಮಾಸ್ತ್ರವನ್ನೇ ಬಿಲ್ಲಿಗೆ ಹೂಡಿದನು. ಆ ಮಹಾ ದೃಶ್ಯವನ್ನು ಕಂಡು ತಲ್ಲಣಿಸಿ, ಸಮುದ್ರನು ಪ್ರತ್ಯಕ್ಷನಾದನು. ಶ್ರೀರಾಮನ ಕ್ಷಮೆ ಬೇಡಿ ಶರಣಾಗತನಾದನು. ಆದರೆ ಸಂಧಾನಮಾಡಿದ ಬಾಣವು ವ್ಯರ್ಥವಾಗುವಂತಿರಲಿಲ್ಲ. ಬಳಿಯಲ್ಲಿ ಕ್ರೂರ ಮೃಗಗಳಿಂದ ತುಂಬಿದ ದ್ರುಮಕುಲ್ಯವೆಂಬ ಪ್ರದೇಶವಿತ್ತು. ರಾಮನು ತನ್ನ

ಬಾಣದಿಂದ ಆ ದ್ರುಮಕುಲ್ಯದ ಕ್ರೂರ ಮೃಗಗಳನ್ನು ಕೊಂದು, ಅಲ್ಲಿಯ ತಪಸ್ವಿಗಳಿಗೆ ಅನುಕೂಲ ಮಾಡಿಕೊಟ್ಟನು. ಹೀಗೆ ರಾಮಬಾಣದಿಂದ ಪಾರಾದ ಸಮುದ್ರನು ಅವನ ಸೇವೆಗೆ ಸಿದ್ಧನಾದನು. ವಾನರರು ತನ್ನ ಮೇಲೆ ಸೇತುವೆ ಕಟ್ಟಬಹುದೆಂದು ಸಲಹೆ ಕೊಟ್ಟು, ಇರಿಸಿದ ಕಲ್ಲು ಮಣ್ಣುಗಳನ್ನು ಕದಲಿಸದೆ ತಾನು ಧರಿಸುವುದಾಗಿ ಮಾತು ಕೊಟ್ಟನು.

ಅಂತಹ ಸೇತುವೆ ಕಟ್ಟಬಲ್ಲವನು ಕೂಡ ಅವರ ನಡುವೆಯೇ ಇದ್ದನು. ಅವನು ದೇವತೆಗಳ ಕರ್ಮಕಾರನಾದ ವಿಶ್ವಕರ್ಮನ ಮಗ ನಳನೆಂಬ ವಾನರ ಶ್ರೇಷ್ಠನು. ನಳನಿಗೆ ತಾನು ಆ ಕಾರ್ಯವನ್ನು ಸಾಧಿಸಬಲ್ಲೆನೆಂದು ತಿಳಿದಿದ್ದರೂ, ತನ್ನ ಶಕ್ತಿಯನ್ನು ತಾನೇ ಹೊಗಳಿಕೊಳ್ಳಬಾರದೆಂದು ಲಜ್ಜೆಯಿಂದ ಸುಮ್ಮನಿದ್ದನು. ಸಮುದ್ರನು ತನ್ನನ್ನು ಸೇತುಬಂಧನ ಕಾರ್ಯಕ್ಕೆ ಆರಿಸಿದ ನಂತರ, ಉತ್ಸಾಹದಿಂದ ಕೆಲಸಕ್ಕೆ ತೊಡಗಿದನು. ವಾನರರೆಲ್ಲರೂ ಅವನ ಆಜ್ಞೆಯ ಮೇರೆ ಬೇಕುಬೇಕಾದ ಸಾಮಗ್ರಿಗಳನ್ನು ತಂದರು ಬಹು ಸ್ವಲ್ಪ ಕಾಲದಲ್ಲಿಯೇ ಸಮುದ್ರದ ಉತ್ತರ ತೀರದಿಂದ ದಕ್ಷಿಣ ದಡದ ಲಂಕೆಯ ವರೆಗೂ ಸೊಗಸಾದ ಸೇತುವೆ ಎದ್ದಿತು. ರಾಮಲಕ್ಷ್ಮಣರು ಬಹು ದೂರದ ಆ ಸೇತುವೆಯನ್ನು ನಡೆಯಬಾರದೆಂದು, ರಾಮನಿಗೆ ಹನುಮಂತನೂ, ಲಕ್ಷ್ಮಣನಿಗೆ ಅಂಗದನೂ ವಾಹನವಾದರು. ಸಮಸ್ತ ವಾನರ ಸೇನೆಯೂ ರಣಘೋಷ ಮಾಡುತ್ತ ಅವರನ್ನು ಬಳಸಿ ಲಂಕೆಗೆ ಪ್ರಯಾಣಮಾಡಿತು. ಹೀಗೆ ಎಲ್ಲರೂ ನಳನಿರ್ಮಿತವಾದ ಸೇತುವನ್ನು ದಾಟಿ, ಲಂಕೆಯ ಬಳಿಯ ಸುವೇಲಾ ಪ್ರಾಂತದಲ್ಲಿ ಬೀಡುಬಿಟ್ಟು ಪಾಳೆಯ ಕಟ್ಟಿದರು.

ದಾಟಲಸಾಧ್ಯವಾದ ಮಹಾ ಸಮುದ್ರಕ್ಕೆ ಸೇತುವೆ ಕಟ್ಟಿ, ಅದನ್ನು ದಾಟಿದ ಮಹಾದ್ಭುತವನ್ನು ಕಂಡು ದೇವತೆಗಳೆಲ್ಲ ಹರ್ಷಗೊಂಡರು. ಸೇತು ಬಂಧನವನ್ನು ಸಾಧಿಸಿದಂತೆಯೇ ತ್ರಿಲೋಕ ಕಂಟಕನಾದ ರಾವಣನ ಸಂಹಾರವೂ ಸಿದ್ಧಿಯಾಗಲೆಂದು ಹರಸಿದರು.

---

# ಸಮರ ಪ್ರಾರಂಭ

ರಾಮನೂ ಅವನ ವಾನರ ಸೇನೆಯೂ ಸಮುದ್ರ ದಾಟುವುದಕ್ಕೆ ಮುಂಚೆ ಉತ್ತರ ತೀರದಲ್ಲಿರುವಾಗಲೇ ಶಾರ್ದೂಲನೆಂಬ ರಾಕ್ಷಸನು ಆ ಮಹಾ ಸೈನ್ಯವನ್ನು ನೋಡಿ ಬೆಜ್ಜರಬಿದ್ದು ರಾವಣನಿಗೆ ಸುದ್ದಿ ಕೊಟ್ಟನು. ಅದು ಕೇಳಿ ರಾವಣನಿಗೆ ಆಶ್ಚರ್ಯವಾಯಿತು. ಹೆದರಿಕೆಯೂ ಆಯಿತು. ಸುಗ್ರೀವನನ್ನು ರಾಮನಿಂದ ಬೇರೆಯಾಗಿಸುವ ಭೇದೋಪಾಯವನ್ನು ಆಚರಿಸಬೇಕೆಂದು ಶುಕನೆಂಬ ರಾಕ್ಷಸ ದೂತನನ್ನು ಕರೆದನು. ಕರೆದು, ಸುಗ್ರೀವನಿಗೆ ಆಸೆತೋರಿಸಿ ತನ್ನ ಕಡೆ ಬರುವ ಹಾಗೆ ಮಾಡಬೇಕೆಂದು ಹೇಳಿ ಕಳುಹಿಸಿದನು. ಶುಕನು ಅದರಂತೆ ಪಕ್ಷಿಯ ರೂಪವನ್ನು ತಾಳಿ ವಾನರ ಸೈನ್ಯವನ್ನು ಹೊಕ್ಕು ಸುಗ್ರೀವನಿಗೆ ರಾವಣನ ಮಾತುಗಳನ್ನು ತಿಳಿಸಿದನು. ಅದು ಕೇಳಿ ಸುಗ್ರೀವನಿಗೂ ಅವನ ವಾನರರಿಗೂ ತಡೆಯಲಾರದ ಕೋಪ ಬಂದಿತು. ಅವರ ರೋಷದ ಭರದಲ್ಲಿ ಶುಕನಿಗೆ ಜೀವ ಉಳಿಯುವುದೇ ಅನುಮಾನವಾಗಿ, ಅವನು ರಾಮನಿಗೆ ಮೊರೆಯಿಟ್ಟನು. ದಯಾಳುವಾದ ರಾಮನು ದೂತನನ್ನು ಕೊಲ್ಲಬಾರದೆಂದು ಅವನನ್ನು ಬಿಡಿಸಿ ಕಳುಹಿಸಿದನು. ಶುಕನ ಬಳಿ ರಾವಣನಿಗಾಗಿ ಬುದ್ಧಿವಾದವನ್ನೂ ಹೇಳಿದನು.

ಶುಕನು ಲಂಕೆಗೆ ಹಿಂದಿರುಗಿ ತನ್ನ ಪರಾಭವವನ್ನೂ ರಾಮನು ಹೇಳಿ ಕಳುಹಿಸಿದ ಮಾತುಗಳನ್ನೂ ರಾವಣನಿಗೆ ತಿಳಿಸಿದನು. ಅದೇ ವೇಳೆಗೆ ರಾಮನು ಸಮುದ್ರಕ್ಕೆ ಸೇತುವೆ ಕಟ್ಟಿ ದಾಟಿದ ಸುದ್ದಿಯೂ ರಾವಣನಿಗೆ ಮುಟ್ಟಿತು. ರಾವಣನಿಗೆ ಆ ಸುದ್ದಿ ನಂಬಲಾಗಲಿಲ್ಲ. ತನ್ನ ಮಂತ್ರಿಗಳಾದ ಶುಕ ಸಾರಣರೆಂಬವರನ್ನು ಕರೆದು, ವಾನರ ಸೇನೆಯ ರಹಸ್ಯಗಳನ್ನು ತಿಳಿದು ಬರುವಂತೆ ನಿಯೋಗಿಸಿದನು. ಅವರು ಇಬ್ಬರೂ ಕಪಿಗಳಂತೆ ವೇಷ ಧರಿಸಿ ಹೋದರೂ, ವಿಭೀಷಣನು ಅವರ ಗುರುತು ಹಿಡಿದು ರಾಮನ ಬಳಿ ಕರೆತಂದನು. ವಾನರ ಸೇನೆಯ ಮಹಾಕೋಪಕ್ಕೆ ತುತ್ತಾಗುತ್ತಿದ್ದ ಆ ಇಬ್ಬರು ನಿಯೋಗಿಗಳನ್ನು ರಾಮನು ಕರುಣೆಯಿಂದ ಕಂಡು, ಅವರಿಗೆ ಸಮಸ್ತ ವಾನರ ಸೈನ್ಯವನ್ನೂ ತೋರಿಸಿ ಲಂಕೆಗೆ ಕಳುಹಿಸಿಕೊಟ್ಟನು. ಅವರು ಬದುಕಿದುದೇ ಸಾಕೆಂದು ಲಂಕೆಗೆ ಹಿಂದಿರುಗಿದರು. ರಾವಣನನ್ನು ಅಲ್ಲಿಯ ಉನ್ನತವಾದ

ಪ್ರಾಸಾದವೊಂದಕ್ಕೆ ಕೊಂಡೊಯ್ದು, ರಾಮನ ವಿಚಿತ್ರ ಸೇನೆಯೆಲ್ಲವನ್ನೂ ತೋರಿಸಿ ವರ್ಣಿಸಿದರು. ಕಡೆಗೆ ಸೀತೆಯನ್ನು ರಾಮನಿಗೆ ಒಪ್ಪಿಸುವುದೇ ಕ್ಷೇಮಕರವೆಂದರು.

ರಾವಣನಿಗೆ ಆ ಸಲಹೆ ಬೇಕಾಗಿರಲಿಲ್ಲ. ಅವರನ್ನು ಧಿಕ್ಕರಿಸಿ ಅಟ್ಟಿ ಬಿಟ್ಟನು. ಶಾರ್ದೂಲನೇ ಮುಂತಾದ ಬೇರೆ ಹಲವು ರಾಕ್ಷಸರನ್ನು ಪುನಃ ಗೂಢಚರ್ಯಕ್ಕಾಗಿ ಕಳುಹಿಸಿದನು. ಅವರು ಕೂಡ ವಿಭೀಷಣನ ಕೈಗೆ ಸಿಕ್ಕಿ ಬಿದ್ದು, ರಾಮನ ಅಪಾರವಾದ ಕರುಣೆಯ ಕಾರಣವಾಗಿ ಬದುಕಿ, ಲಂಕೆಯನ್ನು ಸೇರಿದರು. ಅವರೂ ಹಿಂದಿನವರು ಹೇಳಿದ ಕತೆಯನ್ನೇ ರಾವಣನಿಗೆ ತಿಳಿಸಿ ದರು. ರಾವಣನಿಗೆ ಏನು ಮಾಡಲೂ ತೋಚಲಿಲ್ಲ.

ಕಡೆಗೆ ಸೀತೆಯನ್ನು ಮೋಸದಿಂದ ಒಲಿಸಿಕೊಳ್ಳಬೇಕೆಂದು ಪ್ರಯತ್ನಿಸಿ ದನು. ರಾಮನ ತಲೆಯ ಹಾಗೆಯೇ ಒಂದು ಮಾಯಾ ಶಿರಸ್ಸನ್ನು ಮಾಡಿಸಿ ದನು. ಅವನ ಬಿಲ್ಲಿನ ರೀತಿಯ ಒಂದು ಬಿಲ್ಲನ್ನೂ, ಸೀತೆಯು ಹನುಮಂತ ನೊಡನೆ ಕಳುಹಿಸಿದ ಚೂಡಾಮಣಿಯಂತಹ ಬೇರೊಂದು ಆಭರಣವನ್ನೂ ಮಾಡಿಸಿದನು. ಅವು ಮೂರನ್ನೂ ಅಶೋಕವನಕ್ಕೆ ಕೊಂಡೊಯ್ದು, ಸೀತೆಯ ಮುಂದಿಟ್ಟು, ತಾನು ರಾಮನನ್ನು ಕೊಂದೆನೆಂದೂ ಆದರಿಂದ ಸೀತೆಯು ರಾಮನ ಆಸೆಯನ್ನು ತೊರೆದು ತನ್ನನ್ನು ಮದುವೆಯಾಗಬೇಕೆಂದೂ ಅಟ್ಟ ಹಾಸದಿಂದ ನುಡಿದನು. ಆ ಮಾತು ಕೇಳಿ ಸೀತೆ ಮೂರ್ಛೆಹೋದಳು. ರಾವಣನು ಅರಮನೆಗೆ ಹಿಂದಿರುಗಿದನು. ಸೀತೆಯ ಕಾವಲಿಗೆ ವಿಭೀಷಣನ ಹೆಂಡತಿಯಾದ ಸರಮೆಯೂ ಒಬ್ಬಳು. ಅವಳಿಗೆ ರಾಕ್ಷಸರ ಮಾಯೆಯೆಲ್ಲ ತಿಳಿದಿತ್ತು. ಮೂರ್ಛಿತಳಾದ ಸೀತೆಯನ್ನು ಎಬ್ಬಿಸಿ, ರಾಕ್ಷಸ ಮಾಯವನ್ನೆಲ್ಲ ಅವಳಿಗೆ ತಿಳಿಸಿದಳು. ಆ ತಿಳುವಳಿಕೆಯಿಂದ ಸೀತೆಯ ದುಃಖವು ಸಮಾಧಾನ ವಾಯಿತು.

ಈ ನಡುವೆ ಲಂಕೆಯಲ್ಲಿ ಅನೇಕ ಉತ್ಪಾತಗಳಾದುವು. ಅವನ್ನು ಕಂಡು ರಾವಣನ ಮನಸ್ಸು ಒಂದೊಂದು ವೇಳೆ ಅಳುಕಿದರೂ, ಸೀತೆಯನ್ನು ಒಪ್ಪಿಸಲು ಅವನು ಇಷ್ಟಪಡಲಿಲ್ಲ. ಅವನ ಚಿಕ್ಕತಂದೆಯಾದ ಮಾಲ್ಯವಂತನು ಕೂಡ ಸೀತೆಯನ್ನು ಹಿಂದಕ್ಕೆ ಕಳುಹಿಸುವುದೇ ಹಿತವೆಂದು ಬೋಧಿಸಿದನು. ರಾವಣನು ಆ ಹಿತವಾದಕ್ಕಾಗಿ ಅವನನ್ನು ನಿಂದಿಸಿ, ಲಂಕೆಯ ರಕ್ಷಣೆಗೆ

ಇನ್ನೂ ಹೆಚ್ಚು ಸೇನೆಯನ್ನು ನಿಲಿಸಿದನು. ನಿಲಿಸಿ, ತನ್ನ ಅರಮನೆಯ ಮೇಲೆ ನಿಂತು ವಾನರ ಸೈನ್ಯವನ್ನು ಈಕ್ಷಿಸುತ್ತಿದ್ದನು.

ಅದೇ ಸಮಯದಲ್ಲಿ ರಾಮನು ಸುವೇಲಾದ್ರಿಯ ತುದಿಯಲ್ಲಿ ನಿಂತು ಲಂಕಾನಗರಿಯನ್ನು ನೋಡುತ್ತಿದ್ದನು. ಜೊತೆಯಲ್ಲಿ ಸುಗ್ರೀವನೇ ಮೊದಲಾದ ವಾನರ ಪ್ರಮುಖರೂ ಲಕ್ಷ್ಮಣನೂ ನಿಂತಿದ್ದರು. ಎದುರಿನ ಲಂಕೆಯ ಪ್ರಾಸಾದದ ಮೇಲೆ ರಾವಣನು ಅಟ್ಟಹಾಸದಿಂದ ನಿಂತಿರುವುದು ಸುಗ್ರೀವನಿಗೆ ಕಾಣಿಸಿತು. ತನ್ನ ಮಿತ್ರನಾದ ರಾಮನೆದುರು ರಾವಣನ ಅಟ್ಟಹಾಸವು ಸರಿಯಲ್ಲವೆಂದು ಸುಗ್ರೀವನಿಗೆ ತೋರಿತು. ತತ್‌ಕ್ಷಣವೆ ಲಂಕೆಗೆ ಹಾರಿ, ಅರಮನೆಯ ಮೇಲೆ ನಿಂತಿದ್ದ ರಾವಣನ ಕಿರೀಟವನ್ನು ಒದೆದು ಕೆಡವಿ, ಅವನನ್ನು ದ್ವಂದ್ವ ಯುದ್ಧಕ್ಕೆ ಕರೆದನು. ರಾವಣನಿಗೂ ಸುಗ್ರೀವನಿಗೂ ಅಲ್ಲಿಯೇ ಭಯಂಕರವಾದ ಕಾಳಗ ಜರುಗಿತು. ಇಬ್ಬರೂ ಸಮವಾದ ಬಲವುಳ್ಳವರು. ರೋಷದ ಆವೇಶದಲ್ಲಿ ರಾವಣನನ್ನು ತೀರಿಸಿಬಿಡಬೇಕೆಂದು ಸುಗ್ರೀವನಿಗೆ ಮನಸ್ಸಾಯಿತು. ಆದರೆ ರಾಮನ ಆಜ್ಞೆಯಿಲ್ಲದೆ ದುಡುಕಿ ಕೆಲಸಮಾಡಬಾರದೆಂದು ತಡೆದನು. ಯುದ್ಧದ ಯೋಚನೆ ಬಿಟ್ಟು ಸೀತೆಯನ್ನು ಒಪ್ಪಿಸಿ ಶರಣಾಗತನಾಗುವುದೇ ಲೇಸೆಂದು ರಾವಣನಿಗೆ ಎಚ್ಚರಿಸಿ, ಸುಗ್ರೀವನು ಸುವೇಲಪರ್ವತಕ್ಕೆ ಹಿಂದಿರುಗಿದನು.

ರಾಮನು ಯುದ್ಧ ಸಮೀಪಿಸಿದುದನ್ನೂ ಆ ಕಾಲದಲ್ಲಿ ತೋರಿಬಂದ ಭಯಂಕರ ಶಕುನಗಳನ್ನೂ ನೋಡಿದನು. ಅಕಾರಣವಾಗಿ ಅನೇಕ ಜೀವಹತ್ಯೆ ನಡೆಯಬಾರದೆಂದು ಅಂಗದನನ್ನು ರಾವಣನ ಬಳಿಗೆ ರಾಯಭಾರಿಯಾಗಿ ಕಳುಹಿಸಿದನು. ಅಂಗದನು ತಿಳಿಸಲು ಬಂದ ಶಾಂತಿ ಸನ್ನಾಹಗಳು ರಾವಣನಿಗೆ ರುಚಿಸಲಿಲ್ಲ. ದೂತನನ್ನು ದಂಡಿಸಬಾರದೆಂಬ ರಾಜಧರ್ಮವನ್ನೂ ಕಡೆಗಣಿಸಿ, ಅಂಗದನನ್ನು ಶಿಕ್ಷಿಸಲು ಆಜ್ಞೆಮಾಡಿದನು. ಆದರೆ ಅಂಗದನನ್ನು ಶಿಕ್ಷಿಸುವುದು ಅಷ್ಟು ಸುಲಭವಾಗಿರಲಿಲ್ಲ. ಅಂಗದನು ತನ್ನನ್ನು ಹಿಡಿಯ ಬಂದವರನ್ನು ಬಡಿದು, ರಾವಣನನ್ನೇ ಅವಮಾನಿಸಿ, ಅವನ ಅರಮನೆಯನ್ನು ಮುರಿದು ಕೆಡವಿ ತನ್ನ ಪಾಳೆಯಕ್ಕೆ ಹಿಂದಿರುಗಿದನು. ಅವನ ದೌತ್ಯ ಮುಗಿಯಿತು.

ಅಂಗದನ ರಾಯಭಾರವು ವಿಫಲವಾಯಿತು. ರಾಕ್ಷಸರೊಡನೆ ಯುದ್ಧವೇ ನಿಶ್ಚಯವಾಯಿತು. ವಾನರರು ವ್ಯರ್ಥವಾಗಿ ವೇಳೆ ಕಳೆಯಲಿಲ್ಲ. ಒಡನೆಯೆ

ಹೊರಟು ಲಂಕೆಯನ್ನು ಮುತ್ತಿದರು. ಅವರಿಗೂ ಅಲ್ಲಿಯ ರಾಕ್ಷಸ ಪಡೆಗೂ ನಡೆದ ಕಾಳಗವು ಘೋರವಾಗಿತ್ತು. ಎರಡೂ ಕಡೆ ವೀರರು ಅನೇಕರು ಮಡಿದರು. ಆದರೆ ಕಪಿಗಳಿಗಿಂತ ರಾಕ್ಷಸರಿಗೇ ಸೋಲು ಬಹಳವಾಗಿತ್ತು. ಅವರ ಪರಿಭವವನ್ನು ಕಂಡು, ರಾವಣನ ಮಗನಾದ ಇಂದ್ರಜಿತ್ತು ತಾನೇ ರಣಭೂಮಿಗೆ ಬಂದನು. ಬಂದು ಬಹುಕಾಲ ಹೋರಾಡಿ, ಕಡೆಗೆ ನಾಗಪಾಶ ದಿಂದ ರಾಮ ಲಕ್ಷ್ಮಣರನ್ನು ಕಟ್ಟಿಹಾಕಿದನು. ತಾನು ಪಡೆದ ಜಯಕ್ಕೆ ಹಿಗ್ಗುತ್ತ ಹಿಂದಿರುಗಿ ರಾವಣನಿಗೆ ತನ್ನ ಜಯವನ್ನು ತಿಳಿಸಿದನು.

ಕೆಳಮುಖವಾಗಿದ್ದ ರಾವಣನ ಧೈರ್ಯವು ಆ ಸುದ್ದಿ ಕೇಳಿ ಮೇಲು ಮುಖವಾಯಿತು. ಅದೇ ಸಮಯವನ್ನು ಉಪಯೋಗಿಸಿಕೊಂಡು ಸೀತೆ ಯನ್ನು ಒಲಿಸಿಕೊಳ್ಳಬೇಕೆಂದು ಎದ್ದನು. ಅವನ ಆಜ್ಞೆಯಂತೆ ರಾಕ್ಷಸ ಸ್ತ್ರೀಯರು ಸೀತೆಯನ್ನು ಪುಷ್ಪಕವಿಮಾನದಲ್ಲಿ ರಣರಂಗಕ್ಕೆ ಕರೆತಂದು, ನಾಗ ಪಾಶಕ್ಕೆ ಸಿಕ್ಕಿ ಸತ್ತಂತೆ ಮಲಗಿದ್ದ ರಾಮ ಲಕ್ಷ್ಮಣರನ್ನು ತೋರಿಸಿದರು. ಅವರ ದುರವಸ್ಥೆಯನ್ನು ಕಂಡು ಪ್ರಲಾಪಿಸುತ್ತ ಸೀತೆಯು ಅಶೋಕವನಕ್ಕೆ ಹಿಂದಿರುಗಿದಳು. ಆದರೆ ತ್ರಿಜಟೆಯು ರಾಮ ಲಕ್ಷ್ಮಣರು ಸತ್ತಿಲ್ಲವೆಂದೂ, ನಾಗಪಾಶಕ್ಕೆ ಸಿಕ್ಕಿರುವುದರಿಂದ ಹಾಗಿರುವರೆಂದೂ ತಿಳಿಸಿ ಸೀತೆಯ ದುಃಖ ವನ್ನು ಶಮನಗೊಳಿಸಿದಳು. ಈ ತ್ರಿಜಟೆಯೇ ಹಿಂದೊಮ್ಮೆ ಅಶೋಕವನದಲ್ಲಿ ಸೀತೆಯು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದುದನ್ನು ತನ್ನ ಸಮಾಧಾನ ವಾಕ್ಯ ಗಳಿಂದ ತಪ್ಪಿಸಿದ್ದಳು.

ರಾಮ ಲಕ್ಷ್ಮಣರು ಮೂರ್ಛೆಹೋಗಿದ್ದರಷ್ಟೆ. ಕೊಂಚ ವೇಳೆಗೆ ರಾಮ ನಿಗೆ ಮೂರ್ಛೆ ತಿಳಿಯಿತು. ಲಕ್ಷ್ಮಣನು ಮಾತ್ರ ಇನ್ನೂ ಹಾಗೆಯೇ ಮಲ ಗಿದ್ದನು. ಆ ಪರಿಸ್ಥಿತಿಯಲ್ಲಿ ಏನು ಮಾಡಬೇಕೆಂದು ಯಾರಿಗೂ ತೋರಲಿಲ್ಲ. ರಾಮ ಸುಗ್ರೀವ ಹನುಮಂತ ವಿಭೀಷಣರು ಮೊದಲಾಗಿ ವಾನರ ಸೇನೆಯ ವರೆಗೆ ಎಲ್ಲರೂ ಯೋಚನೆಯಲ್ಲಿ ಮುಳುಗಿದ್ದರು. ಆ ವೇಳೆಗೆ ಸರಿಯಾಗಿ ಶ್ರೀಮನ್ನಾರಾಯಣನ ವಾಹನನಾದ ಗರುತ್ಮಂತನೆ ಅಲ್ಲಿಗೆ ಬಂದನು. ರಾಮನು ಸಾಕ್ಷಾನ್ನಾರಾಯಣನ ಅವತಾರ. ಸ್ವಾಮಿಯು ಸರ್ಪಪಾಶದಿಂದ ಕ್ಲೇಶ ಪಡುತ್ತಿರುವಾಗ, ಪನ್ನಗಾರಿಯಾಗಿ ಆತನ ಕಿಂಕರನಾದ ಗರುತ್ಮಂತನು ನೆರವಿಗೆ ಬಾರದೆ ಹೋದಾನೆ! ಗರುಡನು ಬಂದುದು ಕಂಡೇ ಸರ್ಪಪಾಶವು

ಸಡಿಲವಾಗಿ ಮಾಯವಾಯಿತು. ಪಾಶಬದ್ಧರಾಗಿದ್ದವರು ನಿದ್ದೆ ತಿಳಿದವರಂತೆ ಮೇಲೆದ್ದರು. ಅದನ್ನು ಕಂಡು ವಾನರರೆಲ್ಲರೂ ಸಂತೋಷದಿಂದ ಸಿಂಹನಾದ ಮಾಡಿದರು.

ಆ ಕೋಲಾಹಲವು ಲಂಕೆಯಲ್ಲಿದ್ದ ರಾವಣನ ಕಿವಿಗೆ ಬಿತ್ತು. ರಾಮ ಲಕ್ಷ್ಮಣರು ಸ್ವಸ್ಥರಾಗಿಲ್ಲದೆ ಕಪಿಗಳ ಕೋಲಾಹಲಕ್ಕೆ ಕಾರಣವಿರದೆಂದು ಅವನು ತಿಳಿದನು. ಆ ಕ್ಷಣವೇ ಪುನಃ ಯುದ್ಧಕ್ಕೆ ಸಿದ್ಧನಾದನು. ಅಲ್ಲಿಂದ ಮುಂದಿನದೆಲ್ಲ ರಾಕ್ಷಸವೀರರ ಸಾವಿನ ಕತೆಯೆ. ಕಪಿಗಳೆಲ್ಲ ಅಮೃತ ಕುಡಿದ ವರಂತೆ ಅಜೇಯರಾಗಿ, ಬಂದ ರಾಕ್ಷಸರನ್ನು ಸದೆಬಡಿಯುತ್ತಿದ್ದರು. ರಾವ ಣನೂ ತನ್ನ ಸೋಲಿಗೆ ಕುಗ್ಗದೆ, ರಾಕ್ಷಸರನ್ನು ಸುಮ್ಮನೆ ಮೃತ್ಯುಮುಖಕ್ಕೆ ತಳ್ಳುತ್ತಿದ್ದನು. ಆ ಯುದ್ಧದಲ್ಲಿ ಅವನ ಮಂತ್ರಿಗಳೂ ಸೇನಾಧಿಪತಿಗಳೂ ಅನೇಕರು ಮಾತ್ರವಲ್ಲದೆ, ಅಸಂಖ್ಯಾತವಾದ ರಾಕ್ಷಸಸೇನೆ ಕೂಡ ನಾಶವಾ ಯಿತು. ಒಬ್ಬ ಸೇನಾಪತಿ, ಒಬ್ಬ ಮಂತ್ರಿ ಹತವಾಗುವುದು ತಡ, ಇನ್ನೊ ಬ್ಬನು ವಾನರರ ಯಮಪಾಶಕ್ಕೆ ಸಿದ್ಧನಾಗುವನು. ಧೂಮ್ರಾಕ್ಷನೆಂಬವನು ಸೇನಾಸಮೇತನಾಗಿ ಬಂದು ಹನುಮಂತನ ಕೈಲಿ ಹರಣ ನೀಗಿದನು. ವಜ್ರ ದಂಷ್ಟ್ರನೆಂಬವನೂ ಅವನ ಅಪಾರ ಸೈನ್ಯವೂ ಅಂಗದನ ಆಘಾತಕ್ಕೆ ಬಲಿಯಾ ಯಿತು. ಅಕಂಪನನನ್ನೂ ಅವನ ಅನಂತ ಪರಿವಾರವನ್ನೂ ಆಂಜನೇಯನು ಧ್ವಂಸಮಾಡಿದನು. ಮಹಾ ಪರಾಕ್ರಮಿಯಾದ ನೀಲನಿಗೆ ಎದುರಾಗಿ ಪ್ರಹ ಸ್ತನೊಡನೆ ಅವನ ಮಹಾ ಸೇನೆಯೂ ನಿರ್ನಾಮವಾಯಿತು. ಆ ದಿನ ನಡೆದ ರಾಕ್ಷಸನಾಶವನ್ನು ಹೇಳತೀರದು.

ನೀಲನ ಕೈಲಿ ಹತನಾದ ಪ್ರಹಸ್ತನು ರಾವಣನ ಪ್ರಧಾನ ಮಂತ್ರಿ. ತನ್ನ ಪ್ರಧಾನ ಮಂತ್ರಿಯೂ ಹತನಾದುದು ಕೇಳಿ ರಾವಣನ ಕೋಪ ಮಿತಿ ಮೀರಿತು. ಎರಡನೆಯ ಯಮನಂತೆ ಯುದ್ಧರಂಗಕ್ಕೆ ನುಗ್ಗಿ, ಸುಗ್ರೀವನೇ ಮೊದಲಾದ ಮಹಾ ವಾನರರನ್ನೆಲ್ಲ ಚೆಲ್ಲಾಪಿಲ್ಲಿಯಾಗಿ ಚೆದರಿಸಿ, ಎದುರಿಗೆ ಬಂದ ಲಕ್ಷ್ಮಣನನ್ನು ಶಕ್ತ್ಯಾಯುಧದಿಂದ ಮೂರ್ಛೆಗೊಳಿಸಿದನು. ಲಕ್ಷ್ಮ ಣನು ಬಿದ್ದುದು ಕಂಡು, ರಾವಣನು ಸಂತೋಷದಿಂದ ಮುನ್ನುಗ್ಗಿ, ಅವನನ್ನು ಎತ್ತಿಕೊಂಡು ಹೋಗಲು ಪ್ರಯತ್ನಿಸಿದನು. ಆದರೆ ಲಕ್ಷ್ಮಣನನ್ನು ನೆಲದಿಂದ ಕದಲಿಸಲಾಗಲಿಲ್ಲ. ಅಷ್ಟರಲ್ಲಿ ರಾವಣನ ಕ್ರೂರಕಾರ್ಯವನ್ನು ಹನುಮಂತನು

ಕಂಡನು. ಮೇರೆ ಮೀರಿದ ಕೋಪದಿಂದ ಮುಂದೆ ಬಂದು, ರಾವಣನನ್ನು ವೀರಾಲಾಪಗಳಿಂದ ನುಡಿಸುತ್ತ, ತನ್ನ ವಜ್ರ ಮುಷ್ಟಿಯನ್ನು ಅವನ ಎದೆಗೆ ಬಿಗಿದನು. ಆ ಪೆಟ್ಟಿಗೆ ರಾವಣನು ನಡುಗಿ ಮೂರ್ಛೆಬಿದ್ದನು. ಪಕ್ಕದಲ್ಲಿಯೇ ಮೂರ್ಛೆ ಮಲಗಿದ್ದ ಲಕ್ಷ್ಮಣನನ್ನು ಆಂಜನೇಯನು ಅನಾಯಾಸವಾಗಿ ಎತ್ತಿ ತಂದು ರಾಮನ ಬಳಿ ಬಿಟ್ಟನು. ಒಂದು ಮುಹೂರ್ತದಲ್ಲಿಯೇ ಲಕ್ಷ್ಮಣನು ಮೂರ್ಛೆತಿಳಿದು ಸ್ವಸ್ಥನಾಗಿ ಎದ್ದನು.

ಅತ್ತ ರಾವಣನೂ ಮೂರ್ಛೆ ತಿಳಿದೆದ್ದು, ಪುನಃ ಯುದ್ಧಕ್ಕೆ ನಿಂತನು. ವಾನರರಲ್ಲಿ ಹಲವರು ಹತರಾಗಿದ್ದರು, ಹಲವರು ಹೆದರಿ ಓಡಿಹೋಗುತ್ತಿದ್ದರು. ಲಕ್ಷ್ಮಣನೇ ಮುಂತಾದವರು ಬಳಲಿದ್ದರು. ಅದರಿಂದ ರಾಮನು ತಾನೇ ರಾವಣನೊಡನೆ ಯುದ್ಧಮಾಡಲು ನಿಂತನು. ಆತನು ಪಾದಾಚಾರಿಯಾಗಿ ರಥಾರೂಢನಾದ ರಾವಣನೊಡನೆ ಯುದ್ಧ ಮಾಡುವುದು ಕಂಡು, ಹನುಮಂತನು ತಾನೇ ಆತನಿಗೆ ವಾಹನನಾದನು. ರಾಮ ರಾವಣರ ಯುದ್ಧ ಮೊದಲಾಯಿತು. ಇಬ್ಬರೂ ಮಹಾ ಪರಾಕ್ರಮಿಗಳ. ಒಬ್ಬರಿಗಿಂತ ಒಬ್ಬರು ವೀರ್ಯದಲ್ಲಿ ಕೀಳಾದವರಲ್ಲ. ಆ ಕಾಳಗ ಬಹು ಕಾಲ ನಡೆಯಿತು. ರಾವಣನಿಗೆ ಹನುಮಂತನ ಕೈಲಿ ತಿಂದ ಪೆಟ್ಟು ಮರೆತಿರಲಿಲ್ಲ. ಆದರಿಂದ ರಾಮನನ್ನು ಗಮನಿಸದೆ ಹನುಮಂತನ ಮೇಲೆಯೇ ಬಾಣದ ಮಳೆಗರೆಯುತ್ತಿದ್ದನು. ಅದು ಕಂಡು ರಾಮನು ತಡೆಯಲಾರದೆ ವಜ್ರಾಯುಧದಂತಹ ಬಾಣವನ್ನು ರಾವಣನ ಎದೆಗೆ ಎಳೆದು ಬೀರಿದನು. ಆ ಪ್ರಹಾರಕ್ಕೆ ರಾವಣನು ತತ್ತರಿಸಿ ಬಿದ್ದನು. ಅವನ ಆಯುಧಗಳೆಲ್ಲ ನೆಲಕ್ಕೆ ಉರುಳಿದುವು. ರಾವಣನು ನಿರಾಯುಧನಾದುದನ್ನು ಕಂಡು ದಯಾಳುವಾದ ರಾಮನು ಧರ್ಮಬುದ್ಧಿಯಿಂದ ಅವನನ್ನು ಕೊಲ್ಲಲಿಲ್ಲ. ಒಂದು ಬಾಣದಿಂದ ಅವನ ಕಿರೀಟವನ್ನು ಕಳಚಿ ಮಾನಭಂಗ ಮಾಡಿದನು. ಅದಾದ ಮೇಲೆ ರಾವಣನ ಪರಾಕ್ರಮವನ್ನು ಪ್ರಶಂಸಿಸಿ ಅವನನ್ನು ಶ್ಲಾಘಿಸಿದನು. ಆತನು ಬಹು ಬಳಲಿರುವುದರಿಂದ ಚೇತರಿಸಿಕೊಂಡು ಮರುದಿವಸ ಯುದ್ಧಕ್ಕೆ ಬರಬಹುದೆಂದು ಅನುಜ್ಞೆ ಕೊಟ್ಟನು. ಹೀಗೆ ರಾಮನು ನೀಡಿದ ಜೀವಭಿಕ್ಷೆಯನ್ನು ಕಂಡು ರಾವಣನಿಗೆ ಬಹು ನಾಚಿಕೆಯಾಯಿತು. ಆದರೆ ಅವನ ಕೈ ಕೀಳಾಗಿತ್ತು. ಸಾರಥಿ ಮಡಿದಿದ್ದನು. ರಥ ಮುರಿದಿತ್ತು. ಕಿರೀಟ ಭಂಗವಾಗಿ ಧನುಸ್ಸು ಚೂರಾಗಿತ್ತು. ದೇಹ

ಬಳಲಿ ಬೆಂಡಾಗಿತ್ತು. ರಾವಣನು ಬೇರೆ ಉಪಾಯಗಾಣದೆ ನಾಚಿಕೆಯಿಂದ ತಲೆ ತಗ್ಗಿಸಿ ಲಂಕೆಗೆ ಹಿಂದಿರುಗಿದನು.

ರಾವಣನು ಹಿಂದಿರುಗಿದ ಮೇಲೆ ರಾಮನು ತನ್ನ ವಾನರಸೇನೆಯ ಕ್ಷೇಮಸಮಾಚಾರಕ್ಕೆ ತಿರುಗಿದನು. ಬಾಣದ ಏಟುಗಳಿಂದ ನೊಂದು ಬಿದ್ದಿದ್ದ ವಾನರರ ಬಳಿಗೆ ಬಂದು, ಅವರ ಮೈಯಲ್ಲಿ ನಾಟಿದ ಬಾಣಗಳನ್ನು ತೆಗೆದು, ರಾಮ ಲಕ್ಷ್ಮಣರಿಬ್ಬರೂ ತಮ್ಮ ಮೃದು ಮಧುರವಾದ ಮಾತುಗಳಿಂದ ಅವರ ನೋವನ್ನು ನಿವಾರಿಸುತ್ತಿದ್ದರು.

---

# ಮಹಾಯುದ್ಧ

ರಾವಣನು ಲಂಕೆಗೆ ಹಿಂದಿರುಗಿ ತನ್ನ ಅವಮಾನಕ್ಕೆ ಪ್ರತಿಮಾಡುವ ಆಲೋಚನೆಗಾಗಿ ಸಭೆ ಸೇರಿಸಿದನು. ಅವನ ತಮ್ಮನಾದ ಕುಂಭಕರ್ಣನನ್ನು ಯುದ್ಧಕ್ಕೆ ಕಳುಹಿಸಬೇಕೆಂದು ನಿಶ್ಚಯವಾಯಿತು. ಆ ಕುಂಭಕರ್ಣನೊಬ್ಬ ವಿಚಿತ್ರ ವ್ಯಕ್ತಿ. ಅವನು ಒಂದು ಸಲ ನಿದ್ದೆ ಮಾಡಿದನೆಂದರೆ, ಆರೇಳು ಎಂಟೊಂಭತ್ತು ತಿಂಗಳಾದರೂ ಸರಿಯೆ, ಎದ್ದೇಳುತ್ತಿರಲಿಲ್ಲ. ರಾವಣನ ದುರದೃಷ್ಟಕ್ಕೆ ಸರಿಯಾಗಿ ಕುಂಭಕರ್ಣನು ಆಗ ತಾನೆ ನಿದ್ದೆ ಮಲಗಿದ್ದನು. ಆದರೂ ಮಹಾ ಪ್ರಯತ್ನಮಾಡಿ ಅವನನ್ನು ನಿದ್ದೆಯಿಂದ ಎಬ್ಬಿಸಿದರು. ಮೊದಲು ಕುಂಭಕರ್ಣನಿಗೆ ಯುದ್ಧಕ್ಕೆ ಹೋಗಲು ಮನಸ್ಸಿರಲಿಲ್ಲ. ವಿಭೀಷಣನ ಮಾತು ಕೇಳದ ರಾವಣನ ಮೂರ್ಖತನವೊಂದು, ತನ್ನ ನಿದ್ದೆ ಹಾಳಾದುದೊಂದು—ಇದರಿಂದ ಕುಂಭಕರ್ಣನಿಗೆ ಕೋಪ ಬಂದಿತ್ತು. ಆದರೂ ಕೊನೆಗೆ ರಾವಣನ ಹಟವೇ ಗೆದ್ದಿತು. ಕುಂಭಕರ್ಣನು ಯುದ್ಧಕ್ಕೆ ಹೊರಡಲೇ ಬೇಕಾಯಿತು.

ಹೊರಟ ಮೇಲಂತೂ ಅವನು ಪೂರ್ಣ ಉತ್ಸಾಹದಿಂದಲೇ ಹೊರಟನು. ರಣರಂಗದಲ್ಲಿ ಕಾಳಗ ಮಾಡಲು ಬಂದ ಕಪಿಗಳನ್ನೆಲ್ಲ ಹಿಡಿದು ನುಂಗುತ್ತ ನಡೆದನು. ಅನೇಕ ಕಪಿಗಳು ಅವನ ಹೊಟ್ಟೆಯೊಳಗಾದರು. ಪರಾಕ್ರಮಿಯಾದ ಅಂಗದನೂ ಕುಂಭಕರ್ಣನ ಮುಂದೆ ನಿಲ್ಲಲಾರದೆ ಹೋದನು. ಕುಂಭಕರ್ಣನ ಪ್ರಹಾರ ಬಿದ್ದು ಸುಗ್ರೀವನಿಗೆ ಮೂರ್ಛೆ ಬಂದಿತು. ವಾನರರಾಜನಾದ ಸುಗ್ರೀವನು ಬಿದ್ದುದು ಕಂಡು, ಕುಂಭಕರ್ಣನು ಅವನನ್ನು ಲಂಕೆಗೆ ಎತ್ತಿಕೊಂಡು ಹೋದನು. ವಾನರರು ಏನು ಮಾಡಲೂ ತೋಚದೆ ನಿಂತಿದ್ದರು. ಅಷ್ಟರಲ್ಲಿ ಲಂಕೆಗೆ ಬರುವ ವೇಳೆಗೆ ಸುಗ್ರೀವನ ಮುಚ್ಛೆ ಕಳೆದಿತ್ತು. ತನ್ನನ್ನು ಹೊತ್ತಿದ್ದ ಕುಂಭಕರ್ಣನನ್ನು ನೋಡಿದನು. ಇದ್ದಕ್ಕಿದ್ದಂತೆ ಆ ರಾಕ್ಷಸನ ಕಿವಿ ಮೂಗುಗಳನ್ನು ಕಚ್ಚಿ ಮೈಯೆಲ್ಲ ಪರಚಿಬಿಟ್ಟನು. ಕಪಿರಾಜನು ಹೀಗೆ ಮೇಲೆ ಬಿದ್ದುದಕ್ಕೆ ಕುಂಭಕರ್ಣನು ಬೆಚ್ಚಿ, ಅವನನ್ನು ಒದರಿದನು. ಸುಗ್ರೀವನು ತನ್ನ ಸೈನ್ಯಕ್ಕೆ ಹಿಂದಿರುಗಿದನು. ಕುಂಭಕರ್ಣನು ತನ್ನ ಅವಮಾನವನ್ನು ನೀಗಬೇಕೆಂದು ಪುನಃ ಕಪಿಸೇನೆಯನ್ನು ಪ್ರವೇಶಿಸಿ,

ವೀರಾವೇಶದಿಂದ ಕಾದಿದನು. ಬಹುಕಾಲ ಕಾದಿ ಕಡೆಗೆ ಲಕ್ಷ್ಮಣನ ಕೈಲಿ ಹತನಾದನು.

ಕುಂಭಕರ್ಣ ವಧೆಯಾದ ಮೇಲೆ ರಾವಣನು ತನ್ನ ಮಕ್ಕಳಾದ ದೇವಾಂತಕ ನರಾಂತಕ ಅತಿಕಾಯರನ್ನೂ, ಮಂತ್ರಿಗಳಾದ ಮಹೋದರ ಮಹಾಪಾರ್ಶ್ವ ತ್ರಿಶಿರಸ್ಸುಗಳನ್ನೂ ಯುದ್ಧಕ್ಕೆ ಪ್ರೇರಿಸಿ ಕಳುಹಿಸಿದನು. ರಾಮನ ಪಡೆಯ ಮಹಾಕಪಿಗಳೂ ಲಕ್ಷ್ಮಣನೂ ಎದುರಿಗೆ ನಿಂತರೆ ಶತ್ರುಗಳಿಗೆ ಉಳಿಗಾಲವೆಲ್ಲಿ! ಬಂದ ಆರು ಜನವೂ ಅವರ ಅಮಿತ ಪರಿವಾರವೂ ಹೇಳ ಹೆಸರಿಲ್ಲದಂತೆ ಹತವಾಯಿತು.

ಇದಾದ ಮೇಲೆ ಯುದ್ಧವನ್ನು ಮುಂದುವರಿಸಲು ಇಂದ್ರಜಿತ್ತು ತಾನೇ ಎದ್ದನು. ಅಭಿಚಾರಿಕವೆಂಬ ಹೋಮವನ್ನು ನಡೆಸಿ, ಬ್ರಹ್ಮನಿಂದ ರಥ ರಥಾಶ್ವ ಸಾರಥಿಗಳನ್ನೂ, ಅನೇಕ ಆಯುಧಗಳನ್ನೂ ಪಡೆದನು. ಅದೃಶ್ಯನಾಗಿ ಗಗನದಲ್ಲಿ ನಿಂತು ಅವುಗಳ ಸಹಾಯದಿಂದ ರಾಮಸೇನೆಯನ್ನು ಬಹು ಪೀಡಿಸಿದನು. ರಾಮ ಲಕ್ಷ್ಮಣರು ಇಂದ್ರಜಿತ್ತನ್ನು ಕಾಣದಿದ್ದರೂ, ಅವನಿರುವ ದಿಕ್ಕಿನ ಶಬ್ದವನ್ನೇ ಹಿಡಿದು ಬಾಣಪ್ರಯೋಗ ಮಾಡುತ್ತಿದ್ದರು. ಆದರೆ ಇಂದ್ರಜಿತುವಿನ ಮಾಯೆಯೇ ಮೇಲಾಗಿ, ರಾಮ ಲಕ್ಷ್ಮಣರು ಬ್ರಹ್ಮಾಸ್ತ್ರದಿಂದ ಮೂರ್ಛಿತರಾದರು. ಅವರ ಸ್ಥಿತಿ ಕಂಡು ಇಂದ್ರಜಿತ್ತು ಲಂಕೆಗೆ ಹಿಂದಿರುಗಿದನು. ತನಗೆ ಜಯವಾಯಿತೆಂದು ಭ್ರಮಿಸಿದನು.

ಇತ್ತ ಮೂರ್ಛೆಬಿದ್ದವರಿಗೆ ಏನು ಸಹಾಯ ಮಾಡಬೇಕೆಂದು ಯಾರಿಗೂ ತಿಳಿಯಲಿಲ್ಲ. ಆಗ ಜಾಂಬವಂತನು ಹಿಮವತ್ಪರ್ವದ ಆಚೆ ಇರುವ ಓಷಧಿ ಪರ್ವತದ ನಾಲ್ಕು ಮೂಲಿಕೆಗಳನ್ನು ತಂದರೆ ಅವರ ಮೂರ್ಛೆ ತಿಳಿಯುವುದೆಂದು ಸಲಹೆ ಕೊಟ್ಟನು. ಆ ಕಾರ್ಯಸಾಧನೆಗೆ ತಕ್ಕವನಾದ ಮಾರುತಿಯು ಆಗಲೇ ಹಿಮವತ್ಪರ್ವತಕ್ಕೆ ಹಾರಿದನು. ಓಷಧಿ ಪರ್ವತದಲ್ಲ ಎಷ್ಟು ಹುಡುಕಿದರೂ ಆ ಮೂಲಿಕೆಗಳು ಸಿಕ್ಕಲಿಲ್ಲ. ಹುಡುಕಿ ಸಾಕಾಗಿ, ಹನುಮಂತನು ಕಡೆಗೆ ಆ ಪರ್ವತವನ್ನೇ ಕಿತ್ತು ತಂದನು ಅಲ್ಲಿಯ ದಿವ್ಯೌಷಧಿಗಳ ಗಂಧದಿಂದಲೇ ರಾಮ ಲಕ್ಷ್ಮಣರು ಚೇತರಿಸಿಕೊಂಡರು. ಸತ್ತು ಬಿದ್ದಿದ್ದ ವಾನರರೆಲ್ಲರೂ ಆ ವಾಸನೆ ಮಾತ್ರದಿಂದಲೇ ಮರಳಿ ಜೀವಿಸಿದರು. ರಾಕ್ಷಸರು ಮಾತ್ರ ತಮ್ಮವರು ಸತ್ತಂತೆಲ್ಲ ಅವರನ್ನು ಸಮುದ್ರಕ್ಕೆ ಎಸೆಯುತ್ತಿದ್ದರು. ಅದರಿಂದ ರಾಕ್ಷಸರಾರೂ ಜೀವಿಸಲಾಗಲಿಲ್ಲ.

ಹೀಗೆ ಬದುಕಿ ಬಂದ ವಾನರ ಯೂಥಪತಿಗಳು ಸುಗ್ರೀವಾಜ್ಞೆಯಂತೆ ಆ ರಾತ್ರಿಯೇ ಲಂಕೆಯನ್ನು ಮುತ್ತಿದರು. ಅನೇಕಾನೇಕ ವೀರ ರಾಕ್ಷಸ ಪ್ರಮುಖರು ಅವರಿಗೆ ಕಾಳಗ ಕೊಟ್ಟರು. ಹಿಂದಿನ ಕತೆ ಪುನಃ ಹೇಳುವಂತಾಯಿತು. ಬಂದ ರಾಕ್ಷಸರೆಲ್ಲರೂ ಹಿಂದಿನವರಂತೆಯೇ ಪ್ರಾಣ ಒಪ್ಪಿಸಿದರು.

ಅದು ಕಂಡು ಇಂದ್ರಜಿತ್ತು ಪುನಃ ಅಭಿಚಾರಿಕ ಹೋಮವನ್ನು ನಡೆಸಿ ದೇವದತ್ತವಾದ ಆಯುಧಗಳೊಡನೆ ಯುದ್ಧಭೂಮಿಯಲ್ಲಿ ಕಾಣಿಸಿಕೊಂಡನು. ಮಾಯಾವಿದ್ಯೆಯ ಬಲದಿಂದ ಯುದ್ಧ ಮಾಡುತ್ತಿದ್ದ ಇಂದ್ರಜಿತುವಿನ ಮೇಲೆ ಶತ್ರುಗಳ ಕೈ ಸಾಗಲಿಲ್ಲ. ಅವನ ಹಾವಳಿ ತಡೆಯಲಾರದೆ ಲಕ್ಷ್ಮಣನು ಬ್ರಹ್ಮಾಸ್ತ್ರ ತೆಗೆಯಲು ಬತ್ತಳಿಕೆಗೆ ಕೈ ನೀಡಿದನು. ಆದರೆ ರಾಮನು ಅವನನ್ನು ತಡೆದನು. ಅಷ್ಟರಲ್ಲಿ ಇಂದ್ರಜಿತ್ತು ಮಾಯಾಸೀತೆಯನ್ನು ನಿರ್ಮಿಸಿ ಎಲ್ಲರಿಗೂ ಕಾಣುವಂತೆ ಅವಳ ತಲೆ ಹೊಯ್ದನು. ನೋಡಿದವರೆಲ್ಲರೂ ಅವಳು ನಿಜವಾದ ಸೀತೆಯೇ ಎಂದು ಭ್ರಮಿಸಿದರು. ಸೀತೆಯ ವಧೆಯಾದ ಮೇಲೆ ಯುದ್ಧವೇಕೆಂದು ಎಲ್ಲರೂ ನಿರಾಶರಾದರು. ಆದರೆ ರಾಕ್ಷಸರ ಮಾಯೆಗಳನ್ನೆಲ್ಲ ಕರತಲಾಮಲಕವಾಗಿ ಬಲ್ಲ ವಿಭೀಷಣನು ವಾಸ್ತವ ಸ್ಥಿತಿಯನ್ನು ತಿಳಿಸಲು, ಎಲ್ಲರೂ ಪುನಃ ಉತ್ಸಾಹಭರಿತರಾಗಿ ಯುದ್ಧಸನ್ನದ್ಧರಾದರು.

ಹೀಗೆ ಮಾಯಾಸೀತೆಯ ವಧೆಯಿಂದ ಶತ್ರುಸಮೂಹವನ್ನು ತಲ್ಲಣಗೊಳಿಸಿ, ಇಂದ್ರಜಿತ್ತು ಲಂಕೆಗೆ ಬಂದು ನಿಕುಂಭಿಲೆಯೆಂಬ ಸ್ಥಳದಲ್ಲಿ ಹೋಮವಾರಂಭಿಸಿದನು. ಅದು ಮುಗಿದ ಮೇಲೆ ಅವನು ಅಜೇಯನಾಗಿ ಅಮರನಾಗುವನು. ಅದು ಅಂತಹ ಹೋಮ. ಆ ಹೋಮವನ್ನು ಇಂದ್ರಜಿತ್ತು ಆರಂಭಿಸಿರುವುದು ವಿಭೀಷಣನಿಗೆ ತಿಳಿಯಿತು. ಆ ಹೋಮದ ಮಹಾಶಕ್ತಿ ಅವನಿಗೆ ಗೊತ್ತಿತ್ತು. ಆದರಿಂದ ಆ ಹೋಮ ಮುಗಿಯುವ ಮುಂಚೆ ಇಂದ್ರಜಿತ್ತನ್ನು ಕೊಂದೇ ತೀರಬೇಕೆಂದು ಲಕ್ಷ್ಮಣನಿಗೆ ಪ್ರೇರಿಸಿ, ತಾನೇ ನಿಕುಂಭಿಲೆಗೆ ದಾರಿ ದೋರುತ್ತ ನಡೆದನು. ಹೀಗೆ ಬಂದ ವೀರರು ನಿಕುಂಭಿಲೆಯ ಬಳಿ ಕಾವಲಿದ್ದ ರಾಕ್ಷಸರನ್ನು ಕೊಂದು ಮುಂದೆ ನುಗ್ಗಿದರು. ಇಂದ್ರಜಿತುವಿನ ಹೋಮ ಇನ್ನೂ ಮುಗಿದಿರಲಿಲ್ಲ. ಆದರೆ ಶತ್ರುಗಳ ಆಗಮನವನ್ನು ಕಂಡೂ ಅವನು ಸುಮ್ಮನೆ ಕುಳಿತಿರುವಂತಿರಲಿಲ್ಲ. ಹೋಮವನ್ನು ಅರ್ಧದಲ್ಲಿಯೇ ಬಿಟ್ಟು ಲಕ್ಷ್ಮಣನಿಗೆದುರಾಗಿ ಬಂದನು. ಲಕ್ಷ್ಮಣನಿಗೂ ಇಂದ್ರಜಿತುವಿಗೂ

ಮಹಾಯುದ್ಧ ನಡೆಯಿತು. ವಾನರಸೇನೆಯು ರಾಕ್ಷಸಸೇನೆಯನ್ನು ಧ್ವಂಸ ಮಾಡಿತು. ಇಂದ್ರಜಿತುವು ಲಕ್ಷ್ಮಣನ ಬಾಣಗಳಿಗೆ ಸಿಕ್ಕಿ ಮಡಿದನು. ಆ ರಾಕ್ಷಸನ ಸಾವಿನಿಂದ ವಾನರಪಾಳೆಯಕ್ಕೆ ಬಹು ಸಂತೋಷವಾಯಿತು.

ಅತ್ತ, ಮಗನು ಮಡಿದುದು ತಿಳಿದು ರಾವಣನು ಬಹು ಗೋಳಾಡಿದನು. ಇಷ್ಟೆಲ್ಲ ಅನರ್ಥಗಳಿಗೂ ಸೀತೆಯೇ ಕಾರಣಳೆಂದೆಣಿಸಿ ಕೋಪಗೊಂಡನು. ಆ ಕೋಪದ ಭರದಲ್ಲಿ ಅವಳನ್ನು ಕೊಲ್ಲಲುದ್ಯೋಗಿಸಿದನು. ಸುಪಾರ್ಶ್ವನೆಂಬ ಮಂತ್ರಿಯು ನಿವಾರಿಸದಿದ್ದರೆ, ಅಂದೇ ಸೀತೆಯು ಹತಳಾಗುತ್ತಿದ್ದಳು. ತನಗಾದ ಮಹಾನಾಶವನ್ನು ಕಂಡೂ ರಾವಣನಿಗೆ ಜಯದ ಹುಚ್ಚು ಹೋಗಲಿಲ್ಲ. ತಾನು ರಂಗಕ್ಕೆ ಇಳಿಯುವ ಮೊದಲು ತನ್ನ ಮೂಲಬಲವನ್ನು ಕಳುಹಿಸಿದನು. ಆ ಮೂರ್ಬಲವು ರಾಮ ಬಾಣಕ್ಕೆ ತುತ್ತಾಯಿತು. ಲಂಕೆಯಲ್ಲಿ ರಾವಣನು ಹೊರತಾಗಿ ಉಳಿದ ವೀರರೆಂದರೆ ಒಂದು ಕೈ ಹಿಡಿಯಷ್ಟಿನವರು. ಒಡೆಯನು ಹೋಗುವುದಕ್ಕೆ ಮುಂಚೆ ತಾವೇ ಯುದ್ಧಕ್ಕೆ ಹೋಗಿ, ತಮ್ಮ ಕೈಲಾದಷ್ಟು ಪರಾಕ್ರಮ ತೋರಿ, ಕಡೆಗೆ ಮಡಿದರು. ಆಗ ರಾವಣನು ತಾನೇ ರಣರಂಗಕ್ಕೆ ಬರಬೇಕಾಯಿತು.

ರಾಮರಾವಣ ಯುದ್ಧ ಮೊದಲಾಯಿತು. ಅಸ್ತ್ರ ಪ್ರತ್ಯಸ್ತ್ರಗಳ ಮಳೆ ಧಾರಾಕಾರವಾಗಿ ಸುರಿಯಿತು. ಯುದ್ಧದ ನಡುವೆ ರಾಮನು ಕೊಂಚ ವಿಶ್ರಾಂತಿಗೆ ನಿಂತಾಗ, ಲಕ್ಷ್ಮಣ ವಿಭೀಷಣರು ರಾವಣನಿಗೆ ಕಾಳಗ ಕೊಟ್ಟರು. ರಾವಣನ ರಥ ರಥಾಶ್ವಗಳು ಪುಡಿಯಾದವು, ಸಾರಥಿ ಸತ್ತನು. ತನ್ನನ್ನು ಬಿಟ್ಟುಹೋದ ವಿಭೀಷಣನನ್ನು ಕಂಡು ರಾವಣನ ಕಣ್ಣು ಕೆಂಡ ಕಾರಿತು. ತಮ್ಮನನ್ನು ತೀರಿಸಿಬಿಡಬೇಕೆಂದು ಒಂದು ಮಹಾಶಕ್ತಿಯನ್ನು ಅವನ ಮೇಲೆ ಬೀಸಿದನು. ವಿಭೀಷಣನ ಮೇಲೆ ಬರುತ್ತಿದ್ದ ಅದನ್ನು ಲಕ್ಷ್ಮಣನು ಖಂಡಿಸಿದನು. ಆದರೆ ಅದು ರಾಕ್ಷಸರ ಕರ್ಮಕಾರನಾದ ಮಯನು ನಿರ್ಮಿಸಿದ ಮಹಾಶಕ್ತಿ. ಅದನ್ನು ಎಸೆದವನು ಮಹಾ ಪರಾಕ್ರಮಿ ರಾವಣ. ಅದು ಲಕ್ಷ್ಮಣನನ್ನು ಮೂರ್ಛೆಗೊಳಿಸಿತು. ರಾವಣನು ಬಹು ಸೋತಿದ್ದನಾಗಿ ಚೇತರಿಸಿಕೊಳ್ಳಲು ಲಂಕೆಗೆ ಹೋದನು.

ಲಕ್ಷ್ಮಣನ ಮೂರ್ಛೆಯಿಂದ ಎಲ್ಲರಿಗೂ ಪುನಃ ಯೋಚನೆ ಕವಿಯಿತು. ಅವರ ನಡುವೆ ಸುಷೇಣನೆಂಬ ಘನ ವೈದ್ಯನಿದ್ದನು. ಹಿಂದೆ ಜಾಂಬವಂತನು

ಹೇಳಿದ್ದ ಓಷಧಿ ಪರ್ವತದ ದಕ್ಷಿಣ ಶಿಖರದಲ್ಲಿಯ ನಾಲ್ಕು ಮೂಲಿಕೆಗಳನ್ನು ತಂದರೆ, ಲಕ್ಷ್ಮಣನು ಚೇತರಿಸಿಕೊಳ್ಳುವನೆಂದು ಅವನು ಹೇಳಿದನು. ಅವುಗಳನ್ನು ತರಲು ಎಂದಿನಂತೆ ಹನುಮಂತನೇ ಹೊರಟನು. ಆದರೆ ಅವನೆಷ್ಟು ಅರಸಿದರೂ ಆ ಮೂಲಿಕೆಗಳು ಕಾಣಿಸಲಿಲ್ಲ. ಕಡೆಗೆ, ಕಾಲವಿಳಂಬವಾಗಬಾರದೆಂದು ಆ ಶಿಖರವನ್ನೇ ಕಿತ್ತು ತಂದನು. ಸುಷೇಣನು ಅಲ್ಲಿಯ ಮೂಲಿಕೆಗಳನ್ನು ತೆಗೆದು, ಲಕ್ಷ್ಮಣನನ್ನು ಎಚ್ಚರಿಸಿದನು.

ಆ ವೇಳೆಗೆ ರಾವಣನು ಆಯಾಸ ನೀಗಿ ಹೊಸ ರಥವೇರಿ ಬಂದನು. ರಾಮನಿಗೆ ರಥವಿಲ್ಲದುದು ಕಂಡು ಇಂದ್ರನು ತನ್ನ ಸಾರಥಿಯಾದ ಮಾತಲಿಯೊಡನೆ ತನ್ನ ರಥವನ್ನೇ ಕಳುಹಿಸಿದನು. ಜರುಗಿದ ಸಂಗ್ರಾಮದಲ್ಲಿ, ರಾಮನು ಎಸೆದ ಇಂದ್ರದತ್ತವಾದ ಶಕ್ತಿಗೆ ಸಿಕ್ಕಿ ರಾವಣನ ಶೂಲ ಪುಡಿಯಾಯಿತು. ಅವನ ರಥಾಶ್ವಗಳೂ ಜರ್ಜರಿತವಾದುವು. ರಾಮ ಬಾಣದ ಪೆಟ್ಟು ತಾಳಲಾರದೆ ರಾವಣನು ಮೈಮರೆತನು. ಅವನ ಸ್ಥಿತಿ ಕಂಡು ಸಾರಥಿಯು ರಥವನ್ನು ಹಿಮ್ಮೆಟ್ಟಿಸಿದನು. ರಥವು ಹಿಂದಿರುಗಿ ಓಡುತ್ತಿರುವಾಗ ರಾವಣನಿಗೆ ಎಚ್ಚರವಾಯಿತು. ಹಿಮ್ಮೆಟ್ಟಿದುದಕ್ಕಾಗಿ ಸಾರಥಿಯನ್ನು ನಿಂದಿಸಿ ಪುನಃ ಯುದ್ಧ ಭೂಮಿಗೆ ಅಭಿಮುಖನಾದನು.

ಆ ಮಹಾ ಯುದ್ಧವನ್ನು ನೋಡಲು ಅನೇಕ ದೇವತೆಗಳೂ ಋಷಿಗಳೂ ಗಗನದಲ್ಲಿ ಕಿಕ್ಕಿರಿದು ನಿಂತಿದ್ದರು. ಅಲ್ಲಿಗೆ ಅಗಸ್ತ್ಯ ಮಹಾಮುನಿಯೂ ಬಂದಿದ್ದನು. ಅವನು ಉಪದೇಶಿಸಿದ ಆದಿತ್ಯ ಹೃದಯ ಮಂತ್ರದ ಬಲದಿಂದ ರಾಮನು ಸೂರ್ಯನನ್ನು ಆರಾಧಿಸಿ ಅವನ ಅನುಗ್ರಹವನ್ನು ಪಡೆದನು. ಅದೇ ಕಾಲದಲ್ಲಿ ರಾವಣನಿಗೆ ಮರಣ ಸೂಚಕಗಳಾದ ಅನೇಕ ದುಶ್ಶಕುನಗಳಾದವು. ಅವನು ಕೊನೆಮುಟ್ಟ ಕಾಳಗವಾಡಲು ಸಿದ್ಧನಾದವನು ಆ ಶಕುನಗಳನ್ನು ಲೆಕ್ಕಿಸಲಿಲ್ಲ.

ರಾಮ ರಾವಣ ಮಹಾಯುದ್ಧವು ಮೊದಲಿಗಿಂತ ಅತಿ ಘೋರವಾಗಿ ನಡೆಯಿತು. ರಾವಣನ ಬಾಣಗಳೆಲ್ಲ ನಿರರ್ಥಕವಾಗುತ್ತಿತ್ತು. ರಾಮನ ಬಾಣಗಳೆಲ್ಲ ಸಾರ್ಥಕವಾಗುತ್ತಿತ್ತು. ಕಡೆಗೆ ಯುದ್ಧವನ್ನು ಕಡೆಗಾಣಿಸಬೇಕೆಂದು ರಾಮನು ರಾವಣನ ತಲೆ ಕತ್ತರಿಸಲು ಮೊದಲು ಮಾಡಿದನು. ಆದರೆ ಕತ್ತರಿಸಿದಂತೆಲ್ಲ ಕತ್ತರಿಸಿದ ಸ್ಥಳದಲ್ಲಿ ಬೇರೊಂದು ತಲೆ ಮೊಳೆಯುತ್ತಿತ್ತು.

ಹೀಗೆ ರಾಮನು ರಾವಣನ ತಲೆಗಳನ್ನು ನೂರೊಂದು ಸಲ ಕತ್ತರಿಸಿದನು. ಅದರಿಂದ ಸ್ವಲ್ಪವೂ ಪ್ರಯೋಜನವಾಗಲಿಲ್ಲ. ಅದು ಕಂಡು, ಮಾತಲಿಯ ಸಲಹೆಯಂತೆ ರಾಮನು ಮಹಾ ಬ್ರಹ್ಮಾಸ್ತ್ರವನ್ನೇ ಪ್ರಯೋಗಿಸಿದನು. ಅದು ರಾವಣನ ಕತೆ ಮುಗಿಸಿತು. ಸ್ವರ್ಗ ಮರ್ತ್ಯ ಪಾತಾಳವೆಲ್ಲ ಹರ್ಷದ ಕಡಲಿನಲ್ಲಿ ಮುಳುಗಿತು.

ವಿಭೀಷಣನು ಬಂಧುಜನ ವಾತ್ಸಲ್ಯವುಳ್ಳವನು. ಇರುವಾಗ ರಾವಣನ ದುರ್ಮಾರ್ಗಕ್ಕೆ ರೋಸಿದರೂ, ಸತ್ತ ಅಣ್ಣನಿಗಾಗಿ ಬಹು ಗೋಳಾಡಿದನು. ರಾಮನ ಹಿತವಚನಗಳಿಂದ ಅವನ ಮೋಹ ಮರೆಯಾಗಿ ಮನಸ್ಸು ಸಮಾಧಾನವಾಯಿತು. ರಾಮನ ಆಜ್ಞೆಯಂತೆ ಪತಿ ಹೀನೆಯರಾದ ರಾಕ್ಷಸ ಸ್ತ್ರೀಯರನ್ನು ಆದಷ್ಟು ಮಟ್ಟಿಗೆ ಸಂತೈಸಿದನು. ಮಡಿದ ಅಣ್ಣನಿಗೆ ಯುಕ್ತ ರೀತಿಯಲ್ಲಿ ಅಪರ ಕ್ರಿಯೆಗಳನ್ನು ನಡೆಸಿದನು.

ಆ ಕರ್ಮಗಳೆಲ್ಲ ಮುಗಿದ ಮೇಲೆ ವಿಭೀಷಣನಿಗೆ ಮಂಗಳ ಸ್ನಾನವಾಯಿತು. ಶ್ರೀ ರಾಮನು ತಾನು ಹಿಂದೆ ವಾಗ್ದಾನಮಾಡಿದ್ದಂತೆ ಅವನಿಗೆ ಲಂಕಾರಾಜ್ಯದ ಪಟ್ಟ ಕಟ್ಟಿದನು. ವಿಭೀಷಣನು ರಾಜನಾದುದು ಕಂಡು ಲಂಕಾವಾಸಿಗಳಿಗೂ ಆನಂದವಾಯಿತು.



# ಶ್ರೀ ಸೀತಾರಾಮ ಸುಖವಾಸ

ಯುದ್ಧವು ಮುಗಿಯಿತು. ಮತ್ತೆ ಎಲ್ಲೆಲ್ಲೂ ಶಾಂತಿ ನೆಲಸಿತು. ರಾವಣನು ಸತ್ತು ರಾಮನಿಗೆ ವಿಜಯವಾದ ವಾರ್ತೆಯನ್ನು ಸೀತೆಗೆ ತಿಳಿಸಬೇಕೆಂದು ಹನುಮಂತನಿಗೆ ಆಜ್ಞೆಯಾಯಿತು. ಹನುಮಂತನು ಪರಮಸಂತೋಷದಿಂದ ಅಶೋಕವನಕ್ಕೆ ಹೋಗಿ ಸೀತೆಗೆ ಆ ಸುದ್ದಿ ತಿಳಿಸಿದನು. ಅವಳಿಗೆ ಆ ಸುದ್ದಿ ಎಷ್ಟು ಕೇಳಿದರೂ ತೃಪ್ತಿಯಾಗಲಿಲ್ಲ. ಹನುಮಂತನ ಮಾತು ಮುಗಿದ ಮೇಲೆ, ಸೀತೆಯು, ರಾಮನನ್ನು ಕಾಣಬೇಕೆಂಬ ತನ್ನ ತವಕವನ್ನು ಸೂಚಿಸಿದಳು. ಸೀತೆಯ ತವಕವನ್ನು ಹನುಮಂತನ ಮುಖದಿಂದ ಕೇಳಿ, ರಾಮನು, ಅವಳನ್ನು ಬರಮಾಡುವಂತೆ ವಿಭೀಷಣನಿಗೆ ಆಜ್ಞಾಪಿಸಿದನು. ಸೀತೆಯು ತಾನು ಇದ್ದುದು ಇದ್ದಂತೆಯೇ ಹೊರಡಲು ಅನುವಾದಳು. ಆದರೆ ಆಕೆಯು ಮಂಗಳಸ್ನಾನ ಮಾಡಿ ತನ್ನೆಡೆಗೆ ಬರಬೇಕೆಂದು ರಾಮನು ಕೋರಿದ್ದನು. ಅದರಿಂದ ಅವಳು ತನ್ನ ಉತ್ಸುಕತೆಯನ್ನು ಅದುಮಿ, ಪತಿಯ ಮಾತಿನಂತೆ ಮಂಗಳಸ್ನಾನವನ್ನು ಮುಗಿಸಿ ಬಂದಳು.

ಅಷ್ಟು ಕಾಲ ಕಾಣದೆ ಆಗ ಸೀತೆಯನ್ನು ಕಂಡು ರಾಮನ ಕಣ್ಣಿನಲ್ಲಿ ಆನಂದಬಾಷ್ಪ ತುಳುಕಿತು. ಅವಳು ಅನುಭವಿಸಿದ ಕಷ್ಟಗಳನ್ನು ನೆನೆದು ಅವನ ಕರುಳು ಮರುಗಿತು. ಆದರೆ ಅಷ್ಟು ವರುಷ ಪರಗೃಹದಲ್ಲಿದ್ದವಳನ್ನು ತಾನು ಪರಿಗ್ರಹಿಸಿದರೆ ಲೋಕವು ಏನೆಂದೀತೆಂದು ಅಳುಕಿ, ಸೀತೆಯನ್ನು ಅವಳೆಣಿಸಿ ಬಂದಂತೆ ಆದರಿಸಿ ಸ್ವೀಕರಿಸಲಿಲ್ಲ. ಪರಪುರುಷನ ಮನೆಯಲ್ಲಿದ್ದು ಶಂಕಾಸ್ಪದಳೆಂದು ಅವಳನ್ನು ತಿರಸ್ಕರಿಸಿದನು. ಪತಿಯ ತಿರಸ್ಕಾರಕ್ಕೆ ಅವಳ ಎದೆ ಒಡೆಯಿತು. ಅಷ್ಟು ವರುಷಗಳಿಂದ ಬಿಡುಗಡೆಯಾದೀತೇ ಎಂದು ಎದುರು ನೋಡುತ್ತಿದ್ದವಳು ಹೀಗಾಗುವುದೆಂದು ಎಣಿಸಿರಲಿಲ್ಲ. ತಾನು ನಂಬಿ ನೆಚ್ಚಿದ್ದ ಪತಿಯೇ ತನ್ನ ನಡತೆಯನ್ನು ನಂಬದೆ ತಿರಸ್ಕರಿಸಿದ ಮೇಲೆ ತಾನೇಕೆ ಜೀವಿಸಿರಬೇಕು, ಎಂದು ಅಗ್ನಿಪ್ರವೇಶ ಮಾಡುವ ನಿಶ್ಚಯ ಮಾಡಿದಳು. ಆದರೂ ಅವಳಿಗೆ ತನ್ನ ಪಾತಿವ್ರತ್ಯದಲ್ಲಿ ಧೈರ್ಯವಿತ್ತು. ಆ ತನ್ನ ಪಾತಿವ್ರತ್ಯವೇ ತನಗೆ ರಕ್ಷೆಯಾಗಿರಲೆಂದು ಪ್ರಾರ್ಥಿಸುತ್ತ, ಸೀತೆಯು ಬೆಂಕಿಗೆ ಬಿದ್ದಳು.

ಅದು ಕಂಡು ಕೂಡ ರಾಮನು ಕಿಂಚಿತ್ತೂ ವ್ಯಾಕುಲವನ್ನು ತೋರಲಿಲ್ಲ. ಸೀತೆಯು ಪರಿಶುದ್ಧಳೆಂದೂ, ಅಗ್ನಿಯಿಂದ ಅವಳಿಗೆ ಹಾನಿಯಾಗದೆಂದೂ ಅವನಿಗೆ ತಿಳಿದಿತ್ತು. ಲೋಕಾಪವಾದವನ್ನು ಕಳೆದುಕೊಳ್ಳುವುದಕ್ಕೋಸ್ಕರವೇ ಅವನು ಸೀತೆಯನ್ನು ನಿರಾಕರಿಸಿ, ಅವಳು ಅಗ್ನಿಪ್ರವೇಶ ಮಾಡಿದರೂ ಸುಮ್ಮ ನಿದ್ದುದು. ಸೀತೆಯು ಅಗ್ನಿಗೆ ಬಿದ್ದ ಗಳಿಗೆ, ಬ್ರಹ್ಮಾದಿ ದೇವತೆಗಳು ಬಂದು ರಾಮನನ್ನು ಹೊಗಳಿ ಸೀತೆಯ ಅಸಾಧಾರಣವಾದ ಪಾತಿವ್ರತ್ಯವನ್ನು ಪ್ರಶಂಸಿ ಸಿದರು. ಅದೇ ವೇಳೆಗೆ ಅಗ್ನಿಪುರುಷನು ತಾನೇ ಬೆಂಕಿಯಿಂದ ಆವಿರ್ಭವಿಸಿ ಸೀತೆಯನ್ನು ರಾಮನಿಗೆ ಒಪ್ಪಿಸಿದನು. ಬೆಂಕಿಯಿಂದ ಉದ್ಧಾರವಾದ ಸೀತೆಯು ಪುಟವಿಟ್ಟ ಚಿನ್ನದಂತೆ ಪ್ರಕಾಶಿಸುತ್ತಿದ್ದಳು. ಈ ರೀತಿ ಸೀತೆಯ ನಿರ್ಮಲ ಚಾರಿತ್ರವು ಸ್ಥಾಪಿತವಾಯಿತು. ರಾಮನು ಪರಮಾನಂದದಿಂದ ಪತ್ನಿಯನ್ನು ಪ್ರತಿಗ್ರಹಿಸಿದನು. ಆ ಮಹೋತ್ಸವ ಕಾಲದಲ್ಲಿ ಇಂದ್ರನು, ಯುದ್ಧದಲ್ಲಿ ಸತ್ತ ಕಪಿ ಕರಡಿಗಳು ಪುನಃ ಬದುಕಲೆಂದು ಅನುಗ್ರಹಿಸಿದನು.

ರಾಮನ ಅರಣ್ಯವಾಸದ ಹದಿನಾಲ್ಕು ವರುಷಗಳ ಗಡುವು ತೀರುತ್ತ ಬಂದಿತ್ತು. ರಾಮ ಲಕ್ಷ್ಮಣರೂ ಮಂಗಳಸ್ನಾನ ಮಾಡಿ ತಮ್ಮ ತಾಪಸ ವೇಷವನ್ನು ಕಳೆಯಬೇಕೆಂದು ವಿಭೀಷಣನು ಪ್ರಾರ್ಥಿಸಿದನು. ಆದರೆ ಭರತನು ತನ್ನ ಆಗಮನವನ್ನೆ ಕಾಯುತ್ತ ಜಟಾ ವಲ್ಕಲ ಧಾರಿಯಾಗಿರುವನೆಂಬುದನ್ನು ರಾಮನು ಮರೆತಿರಲಿಲ್ಲ. ಅದರಿಂದ ಆಗಲೇ ಮಂಗಳಸ್ನಾನಕ್ಕೆ ಒಪ್ಪಲಿಲ್ಲ. ಒಂದೆರಡು ದಿನ ಲಂಕೆಯಲ್ಲಿದ್ದು ಹೋಗಬೇಕೆಂದ ವಿಭೀಷಣನ ಪ್ರಾರ್ಥನೆ ಯನ್ನೂ ಮನ್ನಿಸಲಾರದೆ ರಾಮ ಲಕ್ಷ್ಮಣರು ಆಗಲೇ ಪ್ರಯಾಣಕ್ಕೆ ಸಿದ್ಧ ರಾದರು. ಅವರ ಪ್ರಯಾಣಕ್ಕೆ ಅನುಕೂಲವಾಗಲು ಪುಷ್ಪಕ ವಿಮಾನವು ಸಿದ್ಧವಾಯಿತು. ಜೊತೆಯಲ್ಲಿ ಸುಗ್ರೀವಾದಿ ವಾನರರೂ, ವಿಭೀಷಣಾದಿ ರಾಕ್ಷಸ ಶ್ರೇಷ್ಠರೂ ಹೊರಟರು.

ಹೋಗುತ್ತಿರುವಾಗ, ಲಂಕೆಯಿಂದ ಅಯೋಧ್ಯೆಯ ವರೆಗಿನ ದಾರಿಯ ಅನೇಕ ಪ್ರದೇಶಗಳನ್ನು ರಾಮನು ಸೀತೆಗೆ ತಿಳಿಯ ಹೇಳಿದನು. ಬರುವಾಗ ದಾರಿಯಲ್ಲಿ ಕಿಷ್ಕಿಂಧೆಗೂ ಬಂದರು. ಸೀತೆಯ ಪ್ರಾರ್ಥನೆಯಂತೆ ವಾನರ ಯೋಧರ ಪತ್ನಿಯರೂ ಅಯೋಧ್ಯೆಗೆ ಹೊರಟರು. ಅಲ್ಲಿಂದ ಮುಂದೆ ಸೀತಾ ರಾಮಲಕ್ಷ್ಮಣರು ತಮಗೆ ಪೂರ್ವಪರಿಚಿತವಾದ ಪ್ರದೇಶಗಳನ್ನು ಗುರುತಿಸುತ್ತ

ಅಲ್ಲಲ್ಲಿ ನಡೆದುದನ್ನು ನೆನೆಯುತ್ತ ಸಾಗಿದರು. ದಾರಿಯಲ್ಲಿ ಭರದ್ವಾಜ ಮಹರ್ಷಿಯ ಆಶ್ರಮ ಸಿಕ್ಕಿತು. ಭರದ್ವಾಜನ ಆತಿಥ್ಯವನ್ನು ನಿರಾಕರಿಸ ಲಾರದೆ ಆ ದಿನ ಎಲ್ಲರೂ ಅಲ್ಲಿಯೇ ನಿಂತರು. ಅಯೋಧ್ಯೆಯಲ್ಲಿ ಭರತನೇ ಮೊದಲಾದ ಸರ್ವರ ಕ್ಷೇಮ ಸಮಾಚಾರಗಳನ್ನೂ ಭರದ್ವಾಜನು ತಿಳಿಸಿದನು. ಮರುದಿನ ಎಲ್ಲರೂ ಅಯೋಧ್ಯೆಗೆ ಪ್ರಯಾಣ ಬೆಳೆಸಿದರು.

ಭರದ್ವಾಜಾಶ್ರಮಕ್ಕೆ ಬರುವ ವೇಳೆಗೆ ವನವಾಸದ ಅವಧಿಯಾದ ಹದಿನಾಲ್ಕು ವರುಷ ಮುಗಿಯಿತು. ರಾಮನು ಅವಧಿ ಮುಗಿದೊಡನೆ ಬಾರ ದಿದ್ದರೆ ತಾನು ಅಗ್ನಿಪ್ರವೇಶಮಾಡುವೆನೆಂದು ಭರತನು ಹಿಂದೆ ಚಿತ್ರಕೂಟದಲ್ಲಿ ಹೇಳಿದ್ದನು. ರಾಮನು ಅದನ್ನು ನೆನೆದು ತನ್ನ ಬರವನ್ನು ಭರತನಿಗೆ ತಿಳಿಸಲು ಆಂಜನೇಯನನ್ನು ಮುಂದಾಗಿ ಕಳುಹಿಸಿದನು. ಆಂಜನೇಯನು ಬರುವ ವೇಳೆಗೆ ಭರತನು ಅಗ್ನಿಕುಂಡವನ್ನು ಪ್ರದಕ್ಷಿಣೆ ಮಾಡುತ್ತಿದ್ದನು. ತಾಪಸ ವೇಷ ಧರಿಸಿ ತಪಸ್ವಿಯಂತೆಯೇ ಜೀವಿಸುತ್ತಿದ್ದ ಭರತನು ಆಂಜನೇ ಯನು ತಂದ ಕುಶಲವಾರ್ತೆಯನ್ನು ಕೇಳಿ ತನ್ನ ಉದ್ಯಮವನ್ನು ತಡೆದನು. ವಾಯುಪುತ್ರನನ್ನು ಆದರದಿಂದ ಆಲಿಂಗಿಸಿ ಬರಮಾಡಿಕೊಂಡು, ಬಳಿಕುಳ್ಳಿರಿಸಿ ಕೊಂಡು ಸೀತಾರಾಮ ಲಕ್ಷ್ಮಣರ ವೃತ್ತಾಂತವನ್ನು ಬೆಸಗೊಂಡನು. ಭರತನು ಪಾದುಕೆಗಳನ್ನು ತಂದುದು ಮೊದಲು ವಿಭೀಷಣ ಪಟ್ಟಾಭಿಷೇಕವೆ ಕಡೆಯಾಗಿ ಎಲ್ಲವನ್ನೂ ಹನುಮಂತನು ಭರತನಿಗೆ ವಿವರಿಸಿದನು.

ಅದೆ ಹೊತ್ತಿಗೆ ಪುಷ್ಪಕ ವಿಮಾನವು ನಂದಿಗ್ರಾಮಕ್ಕೆ ಬಂತು. ಭರತನು ತಡೆಯಲಾರದ ಉತ್ಸುಕತೆಯಿಂದ ಹೋಗಿ ಸೀತಾರಾಮ ಲಕ್ಷ್ಮಣರನ್ನೂ ಜೊತೆಗೆ ಬಂದ ಪರಿವಾರವನ್ನೂ ಸತ್ಕರಿಸಿ ತನ್ನ ಆಶ್ರಮಕ್ಕೆ ಕರೆತಂದನು. ಪರಸ್ಪರ ಕುಶಲ ಪ್ರಶ್ನೆಗಳಾದ ಮೇಲೆ ಸೀತಾ ರಾಮ ಲಕ್ಷ್ಮಣ ಭರತರು ಪರಸ್ಪರ ವಿಚಾರಗಳನ್ನು ಮನವಾರೆ ಕಿವಿ ತುಂಬ ಕೇಳಿದರು.

ರಾಮನು ನಂದಿಗ್ರಾಮಕ್ಕೆ ಬಂದ ಸುದ್ದಿ ಅಯೋಧ್ಯೆಗೆ ಹೊಸ ಜೀವ ತಂದಿತು. ರಾಮಾಗಮನಕ್ಕೆ ಅನುಗುಣವಾಗಿ ನಗರವನ್ನು ಅಲಂಕರಿಸಿದರು. ನಂದಿಗ್ರಾಮದಲ್ಲಿ ರಾಮನು ಭರತನ ಪ್ರಾರ್ಥನೆಯನ್ನು ಮನ್ನಿಸಿ, ಕೋಸಲ ರಾಜ್ಯವನ್ನು ಅಂಗೀಕರಿಸಲು ಸಮ್ಮತಿಸಿದನು. ಸೋದರರು ಮೂವರೂ ಅಲ್ಲಿಯೇ ತಮ್ಮ ಜಟಾ ವಲ್ಕಲಗಳನ್ನು ಕಳೆದು ಮಂಗಳಸ್ನಾನ ಮಾಡಿದರು.

ರಥಾರೂಢರಾಗಿ ಜಾನಕಿಯೊಡನೆ ಅಯೋಧ್ಯೆಗೆ ಹೊರಟರು. ಮಂತ್ರಿ ಪುರೋಹಿತರೂ ವಾನರ ರಾಕ್ಷಸರೂ ಅವರನ್ನು ಹಿಂಬಾಲಿಸಿದರು.

ಶ್ರೀ ರಾಮಚಂದ್ರನಿಗೆ ಪಟ್ಟಾಭಿಷೇಕವಾಯಿತು. ಭರತನು ರಾಮನ ಅನುಗ್ರಹಕ್ಕೆ ತಲೆಬಾಗಿ ಯುವರಾಜಪದವಿಯನ್ನು ಸ್ವೀಕರಿಸಿದನು. ಕೌಸಲ್ಯಾ ಸುಮಿತ್ರೆಯರು ಅಷ್ಟು ದಿನ ಕಾಣದಿದ್ದ ತಮ್ಮ ಮಕ್ಕಳನ್ನೂ ಸೀತೆಯನ್ನೂ ಕಂಡು ಹಿಗ್ಗಿದರು. ಕೆಟ್ಟ ಮೇಲೆ ಬುದ್ಧಿ ಕಲಿತ ಕೈಕೇಯಿಯೂ ಬಹು ವಿಶ್ವಾಸ ವಾತ್ಸಲ್ಯಗಳಿಂದ ಎಲ್ಲರನ್ನೂ ಒಲಮಾಡಿಕೊಂಡಳು. ಹೀಗೆ ಎಲ್ಲವೂ ಮಂಗಲದಲ್ಲಿ ಮುಗಿದ ಮೇಲೆ, ಸುಗ್ರೀವಾದಿ ವಾನರರು ರಾಮನ ಅಪ್ಪಣೆ ಪಡೆದು ಕಿಷ್ಕಿಂಧೆಗೆ ತೆರಳಿದರು. ವಿಭೀಷಣನೂ ಅವನ ರಾಕ್ಷಸರೂ ಲಂಕೆಗೆ ತೆರಳಲು ರಾಮನ ಅನುಜ್ಞೆ ಸಿಕ್ಕಿತು. ಇತ್ತ ಅಯೋಧ್ಯೆಯಲ್ಲಿ ಸೀತಾ ರಾಮರು ಸೋದರರು ಮೂವರ ಸತತ ಸೇವೆಯಿಂದ ಸಂತುಷ್ಟರಾಗಿ, ಪ್ರಜೆಗಳೆಲ್ಲರ ಪ್ರೀತಿ ಗೌರವಗಳನ್ನು ಸಂಪಾದಿಸಿ ಸುಖದಿಂದಿದ್ದರು.



# ಒಪ್ಪೋಲೆ

| ಪುಟ | ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೧ | ೮ | ಯುಾಕೆ | ಏಕೆ |
| ೧೦ | ೬ | ಕರದೊಯ್ದು | ಕರೆದೊಯ್ದು |
| ೧೮ | ೪ | ಳಂದಿರಾದ | ಳುದಿರಾದ |
| ೨೧ | ೧೫ | ರಾತ್ರಿಯೇ | ರಾತ್ರಿಯೋ |
| ೨೭ | ೩ | ತನ್ನ | ತಮ್ಮ |
| ೩೬ | ೧೮ | ಹಿಂಧಿರುಗು | ಹಿಂದಿರುಗು |
| ೪೮ | ೨೧ | ಗೆಡುಹುತ್ತ | ಗೆಡಹುತ್ತ |
| ೫೦ | ೪ | ಎಂದು ಹೆದರಿ | ಎಂದು ರಾಃ |
| ೫೧ | ೪ | ಬಿಟ್ಟನು | ಬಿಟ್ಟಿತು |
| ೫೧ | ೨೧ | ಲಕ್ಷ್ಮಣನು | ಲಕ್ಷ್ಮಣರು |
| ೫೪ | ೪ | ರಾಮುಲಕ್ಷ್ಮರು | ರಾಮ ಲಕ್ಷ್ಮಣರು |
| ೫೪ | ೧೫ | ಮಾಡವುದಾಗಿ | ಮಾಡುವುದಾಗಿ |
| ೬೩ | ೨೭ | ಸುಮ್ಮನೇ | ಸುಮ್ಮನೆ |
| ೬೪ | ೧೦ | ಬಳಿಯುಲಂಬವೆಂಬ | ಬಳಿಯ ಲಂಬವೆಂಬ |
| ೭೫ | ೧೮ | ಆವರ | ಅವರ |
| ೭೮ | ೧೧ | ಅಕ್ಷಯ ಕುಮಾರ | ಅಕ್ಷಕುಮಾರ |
| ೮೪ | ೨೦ | ತಿಳಿಧಿತ್ತು | ತಿಳಿದಿತ್ತು |
| ೯೧ | ೧೯ | ಹಿಮವತ್ಪರ್ವದ | ಹಿಮವತ್ಪರ್ವತದ |
| ೯೨ | ೨೩ | ದಾರಿ ದೋರುತ್ತ | ದಾರಿದೋರುತ್ತ |
| ೯೨ | ೨೭ | ಇಂದಜಿತು | ಇಂದ್ರಜಿತು |